**ADDENDUM No. FEE 9 FLL 2005, Bangalore, Dated: 1st June 2005**

In Government Order No. FEE 297 FGL 98, dated 26.3.2003 in the order portion after the words 3.20 ha. of forest land the words and figures (1.5 acres from Sy.No.4 of Gilalgundi State forest and 6.5 acres from Sy.No.47 of Kone hosur Minor Forest)" shall be inserted.

By Order and in the name of the Governor of Karnataka,

**S.R. VATSALA**

P.R. 793

Under Secretary to Government,

Forest, Ecology and Environment Department.

**ಇಂಧನ ಸಚಿವಾಲಯ**

**ವಿಷಯ:** ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ 1994ರ ಅಡಿಯಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ಖಾಸಗಿ ವಿದ್ಯುತ್ ಉತ್ಪಾದನಾ ಸಂಸ್ಥೆಗಳ ನೌಕರರ ಕಾರ್ಯನಿರ್ವಹಣಾ ನಿರಾಕರಣೆಯನ್ನು ಬಹಿಷ್ಕರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 96 ಪಿಪಿಸಿ 2004, ದಿನಾಂಕ: 26.11.2004.

2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಎ1/ಆರ್1ಹೆಚ್/1078 ದಿನಾಂಕ: 12.5.2005.

**ಪ್ರಸ್ತಾವನೆ:**

ಕರ್ನಾಟಕ ಅತ್ಯಾವಶ್ಯಕ ನಿರ್ವಹಣಾ ಕಾಯ್ದೆ 1994ರನ್ವಯ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ರಾಜ್ಯದ ಇತರ ಎಲ್ಲಾ ಖಾಸಗಿ ವಿದ್ಯುತ್ ಉತ್ಪಾದನಾ ಸಂಸ್ಥೆಗಳ ಎಲ್ಲಾ ವರ್ಗದ ನೌಕರರಿಗೂ ಅನ್ವಯವಾಗುವಂತೆ ದಿನಾಂಕ: 1.1.2005ರಿಂದ ಜಾರಿಗೆ ಬರುವಂತೆ ಆರು ತಿಂಗಳ ಅವಧಿಗೆ ಕರ್ತವ್ಯ ನಿರ್ವಹಣಾ ನಿರಾಕರಣೆಯನ್ನು ಓದಲಾದ (1)ರ ಆದೇಶದಲ್ಲಿ ನಿಷೇದಿಸಲಾಗಿತ್ತು. ಓದಲಾದ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಇವರು ರಾಜ್ಯದಲ್ಲಿ ಪ್ರಸಕ್ತ ಬಿಕ್ಕಟ್ಟು ಮುಂದುವರಿದಿರುವುದರಿಂದ ವಿದ್ಯುತ್ ಉತ್ಪಾದನಾ ಕಾರ್ಯದಲ್ಲಿ ತೊಡಗಿಸಿ ಕೊಂಡಿರುವ ನೌಕರರು ಹಠಾತ್ ಮುಷ್ಕರ ನಡೆಸಿದಲ್ಲಿ ಪರಿಸ್ಥಿತಿಯನ್ನು ಎದುರಿಸುವುದು ಕಷ್ಟಕರವಾಗುವ ಹಿನ್ನೆಲೆಯಲ್ಲಿ ದಿನಾಂಕ: 1.7.2005ರಿಂದ ಜಾರಿಗೆ ಬರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಎಲ್ಲಾ ಸೇವೆಗಳ ಕರ್ತವ್ಯ ನಿರ್ವಹಣಾ ನಿರಾಕರಣೆಯನ್ನು ನಿಷೇದಿಸಿ ಆದೇಶ ಹೊರಡಿಸಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 96 ಪಿಪಿಸಿ 2004, ಬೆಂಗಳೂರು, ದಿನಾಂಕ: 4ನೇ ಜೂನ್ 2005**

ಕರ್ನಾಟಕ ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ 1994ರನ್ವಯ ಕರ್ನಾಟಕ ವಿದ್ಯುತ್ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಉತ್ಪಾದನೆ, ಸಂಗ್ರಹಣೆ, ವಿತರಣೆ, ಸರಬರಾಜು ಅಥವಾ ಪ್ರಸರಣಕ್ಕೆ ಸಂಬಂಧಿಸಿದ ಸೇವೆಯನ್ನು ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ 1994ರ ಪ್ರಕರಣ (3) ಉಪ ಪ್ರಕರಣ (3)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಹಾಗೂ ರಾಜ್ಯದ ಎಲ್ಲಾ ಖಾಸಗಿ ವಿದ್ಯುತ್ ಉತ್ಪಾದನಾ ಸಂಸ್ಥೆಗಳ ಎಲ್ಲಾ ವರ್ಗದ ಸೇವೆಗಳಿಗೆ ಅನ್ವಯವಾಗುವಂತೆ ದಿನಾಂಕ: 1.7.2005ರಿಂದ 31.12.2005ರವರೆಗೆ ಆರು ತಿಂಗಳ ಅವಧಿಗೆ ಕರ್ತವ್ಯ ನಿರ್ವಹಣಾ ನಿರಾಕರಣೆಯನ್ನು ನಿಷೇದಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 794

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ಯೋಜನೆ ಹಾಗೂ ಸಾಂಖ್ಯಿಕ ಸಚಿವಾಲಯ**

**ವಿಷಯ:** ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಉಪ ನಿರ್ದೇಶಕರಾದ ಶ್ರೀ ಎಸ್. ರಾಜರಾವ್ ನಿವೃತ್ತಿ ಮತ್ತು ಶ್ರೀ ಹೆಚ್.ಬಿ. ನಾಗಬೋರಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತಿ), ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಬಗ್ಗೆ-ನಿವೃತ್ತಿ ಉಪದಾನಗಳನ್ನು ಬಿಡುಗಡೆ ಮಾಡುವುದು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಐಎಫ್ಎಸ್ 61 ಡಿಎಸ್ಇ 93, ದಿನಾಂಕ: 13.12.1993.

2. ಲೋಕಾಯುಕ್ತರಿಂದ ಬಂದಿರುವ ವರದಿ ದಿನಾಂಕ 5.3.2001.

3. ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ: ಆಸಾಂನಿ 11556-23-ಆಡಳಿತ-(2): 2001, ದಿನಾಂಕ: 3.9.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 13.12.1993ರ ಆದೇಶದಲ್ಲಿ ಶ್ರೀ ಎಸ್. ರಾಜಾರಾವ್, ಉಪ ನಿರ್ದೇಶಕರು (ನಿವೃತ್ತ), ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಹಾಗೂ ಶ್ರೀ ಹೆಚ್.ಬಿ. ನಾಗಬೋರಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ), ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಇವರುಗಳ ವಿರುದ್ಧ ನಿರ್ದೇಶನಾಲಯದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಅವ್ಯವಹಾರ ಎಸಗಿರುವ ಆರೋಪಗಳ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ (2)ರ ದಿನಾಂಕ 5.3.2001ರ ಪತ್ರದಲ್ಲಿ ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು, ಕರ್ನಾಟಕ ಲೋಕಾಯುಕ್ತ ರವರು ಆರೋಪಿತ ಅಧಿಕಾರಿಗಳಾದ ಶ್ರೀ ಎಸ್. ರಾಜಾರಾವ್, ಉಪ ನಿರ್ದೇಶಕರು (ನಿವೃತ್ತ) ಮತ್ತು ಶ್ರೀ ಹೆಚ್.ಬಿ. ನಾಗಬೋರಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ) ಇವರುಗಳ ವಿರುದ್ಧ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಳ್ಳಲಾಗಿದೆ ಎಂಬ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಿ, ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ದಿನಾಂಕ: 3.9.2004ರ ಪತ್ರದಲ್ಲಿ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ರವರು ವರದಿ ಮಾಡಿ ಶ್ರೀ ಎಸ್. ರಾಜಾರಾವ್, ಉಪ ನಿರ್ದೇಶಕರು (ನಿವೃತ್ತ) ಹಾಗೂ ಶ್ರೀ ಹೆಚ್.ಬಿ. ನಾಗಬೋರಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ), ಈ

ಇಬ್ಬರು ಆಪಾದಿತ ಅಧಿಕಾರಿ : ನೌಕರರು ದುರುಪಯೋಗಪಡಿಸಿಕೊಂಡಿದ್ದರೆನ್ನಲಾದ ಮೊತ್ತ ಕ್ರಮವಾಗಿ ರೂ. 78,000/- ಹಾಗೂ ರೂ.77,488/- ಅನ್ನು ಅವರ ಮಾಸಿಕ ವೇತನದಿಂದ ಕ್ರಮವಾಗಿ ರೂ. 3,120/- ಮತ್ತು ರೂ.1990/- ರಂತೆ ಖಟಾಯಿಸಲು ಆದೇಶಿಸಲಾಗಿದ್ದು, ಅದರಂತೆ ಶ್ರೀ ಎಸ್. ರಾಜಾರಾವ್, ಉಪ ನಿರ್ದೇಶಕರು (ನಿವೃತ್ತ) ರವರ ವೇತನದಲ್ಲಿ ನವೆಂಬರ್ 1994 ರಿಂದ ಅಕ್ಟೋಬರ್ 1995ರ ವರೆಗೆ ಒಟ್ಟು 37,440/- ನ್ನು ಹಾಗೂ ಶ್ರೀ ಹೆಚ್.ಬಿ. ನಾಗಬೋರಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ) ರವರ ವೇತನದಿಂದ ಸೆಪ್ಟೆಂಬರ್ 1994 ರಿಂದ ಮೇ 1995ರ ವರೆಗೆ ಒಟ್ಟು ರೂ.17100/-ನ್ನು ಖಟಾಯಿಸಲಾಗಿರುತ್ತದೆ. ಇನ್ನುಳಿದ ಬಾಕಿ ಮೊತ್ತ ಕ್ರಮವಾಗಿ ರೂ. 40,560/- ಹಾಗೂ ರೂ. 60,388/- ಗಳನ್ನು ಇವರುಗಳ ನಿವೃತ್ತಿ ಉಪದಾನಗಳಿಂದ ಕಡಿತಗೊಳಿಸಬೇಕಾಗಿರುತ್ತದೆ ಎಂದು ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ರವರು ತಿಳಿಸಿರುತ್ತಾರೆ.

ಈ ನಿಟ್ಟಿನಲ್ಲಿ ಸರ್ಕಾರವು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಎಸ್. ರಾಜಾರಾವ್, ಉಪ ನಿರ್ದೇಶಕರು (ನಿವೃತ್ತ) ಹಾಗೂ ಶ್ರೀ ಹೆಚ್.ಬಿ. ನಾಗಬೋರಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ) ಇವರುಗಳು ಕ್ರಮವಾಗಿ ದಿನಾಂಕ: 30.11.1996ರಲ್ಲಿ ಹಾಗೂ 30.6.1995 ರಲ್ಲಿ ವಯೋನಿವೃತ್ತಿ ಹೊಂದಿರುತ್ತಾರೆ. ಇವರ ವಿರುದ್ಧ ಸಾಬೀತಾದ ಆಪಾದನೆಗಳಿಗೆ ನಿವೃತ್ತಿಯ ನಂತರದ ಹಂತದಲ್ಲಿ ನಿಯಮಗಳನ್ವಯ ಶಿಕ್ಷೆ ವಿಧಿಸುವುದು ಸಮಂಜಸವಲ್ಲವೆಂದು, ಅಲ್ಲದೆ ಇವರಿಗೆ ನಿಗದಿಪಡಿಸಲಾದ ಡಿ.ಸಿ.ಆರ್.ಜಿ. ಹಾಗೂ ಕಮ್ಯೂಟೇಷನ್ ಪೆನ್‌ಷನ್ ಮೊಬಲಗನ್ನು ತಡೆ ಹಿಡಿದಿರುವುದು ಒಂದು ರೀತಿಯ ಶಿಕ್ಷೆ ನೀಡಿದಂತೆಯೆ ಆಗಿರುತ್ತದೆ ಎಂಬುದನ್ನು ಮನಗಂಡು, ಈ ಆಪಾದಿತ ಅಧಿಕಾರಿಗಳು ದುರುಪಯೋಗಿಸಿಕೊಂಡಿದ್ದರೆನ್ನಲಾದ ಮೊಬಲಗನ್ನು ಅವರುಗಳ ಡಿ.ಸಿ.ಆರ್.ಜಿ. ಮತ್ತು ಕಮ್ಯೂಟೇಷನ್ ಪೆನ್‌ಷನ್‌ನಿಂದ ಶೇಕಡ 9ರಂತೆ ಬಡ್ಡಿ ವಿಧಿಸಿ ಕಡಿತಗೊಳಿಸಿ ಉಳಿದ ನಿವೃತ್ತಿ ಉಪದಾನಗಳನ್ನು ಮಂಜೂರು ಮಾಡುವುದು ಸಮಂಜಸವೆಂದು ಸರ್ಕಾರ ಪರಿಗಣಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಐಎಫ್‌ಎಸ್ 61 ಡಿಎಸ್‌ಇ 1993, ಬೆಂಗಳೂರು, ದಿನಾಂಕ: 3ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಎಸ್. ರಾಜಾರಾವ್, ನಿವೃತ್ತ ಉಪ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಇವರು ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುವ ಬಾಬತ್ತು ರೂ. 78,000/-ಗಳಲ್ಲಿ ಅವರು ಸೇವೆಯಲ್ಲಿದ್ದಾಗ, ಅವರ ವೇತನದಲ್ಲಿ ಒಟ್ಟು ರೂ. 37,440/- ಗಳನ್ನು ಖಟಾಯಿಸಲಾಗಿದ್ದು, ಉಳಿದ ಮೊತ್ತವಾದ ರೂ. 40,560/ (ರೂ. ನಲವತ್ತು ಸಾವಿರದ ಐನ್ನೂರ ಅರವತ್ತು ಮಾತ್ರ) ಗಳನ್ನು ಅವರ ಡಿ.ಸಿ.ಆರ್.ಜಿ. ಮತ್ತು ಇತರೆ ನಿವೃತ್ತಿ ಉಪದಾನಗಳಿಂದ ಶೇಕಡ 9ರಂತೆ ಬಡ್ಡಿ ವಿಧಿಸಿ ಕಡಿತಗೊಳಿಸಲು, ಹಾಗೂ ಉಳಿದ ನಿವೃತ್ತಿ ಉಪದಾನಗಳನ್ನು ಮಂಜೂರು ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

ಹಾಗೂ ಶ್ರೀ ಹೆಚ್.ಬಿ. ನಾಗಬೋರಯ್ಯ, ನಿವೃತ್ತಿ ಪ್ರಥಮ ದರ್ಜೆ ಸಹಾಯಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಇವರು ಸರ್ಕಾರದ ಹಣವನ್ನು ದುರುಪಯೋಗಿಸಿಕೊಂಡಿರುವ ಬಾಬತ್ತು ರೂ. 77,488/- ಗಳಲ್ಲಿ ಅವರು ಸೇವೆಯಲ್ಲಿದ್ದಾಗ ಅವರ ವೇತನದಲ್ಲಿ ಒಟ್ಟು ರೂ. 17,100/- ಗಳನ್ನು ಖಟಾಯಿಸಲಾಗಿದ್ದು ಉಳಿದ ಮೊತ್ತವಾದ ರೂ. 60,388/- (ರೂ. ಅರವತ್ತು ಸಾವಿರದ ಮುನ್ನೂರ ಎಂಭತ್ತೆಂಟು ಮಾತ್ರ) ಗಳನ್ನು ಅವರ ಡಿ.ಸಿ.ಆರ್.ಜಿ. ಮತ್ತು ಇತರೆ ನಿವೃತ್ತಿ ಉಪದಾನಗಳಿಂದ ಶೇಕಡ 9ರಂತೆ ಬಡ್ಡಿ ವಿಧಿಸಿ ಕಡಿತಗೊಳಿಸಲು ಹಾಗೂ ಉಳಿದ ನಿವೃತ್ತಿ ಉಪದಾನಗಳನ್ನು ಮಂಜೂರು ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಿವಲಿಂಗಯ್ಯ**

ಪಿ.ಆರ್. 795

ಸರ್ಕಾರದ ಅಧೀನ ಕಾರ್ಯದರ್ಶಿ,

ಯೋಜನೆ ಹಾಗೂ ಸಾಂಖ್ಯಿಕ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** ಮಂಗಳೂರು ವಿಶ್ವವಿದ್ಯಾಲಯದ ಮಡಿಕೇರಿಯ ಘಟಕ ಕಾಲೇಜಿನ ಅರೆಕಾಲಿಕ ಉಪನ್ಯಾಸಕರಾದ ಶ್ರೀ ಎಂ.ಪಿ. ಕೃಷ್ಣರವರ ಸೇವಾ ಸಕ್ರಮತೆ.

**ಓದಲಾಗಿದೆ:**
(1) ದಿನಾಂಕ:22-01-1997 ಸಂ.ಡಿಪಿಎಆರ್ 48 ಎಸ್‌ಆರ್‌ಇ 96ರ ಅಧಿಸೂಚನೆ.
(2) ದಿನಾಂಕ:09-07-2002 ಸಂ.ಡಿಪಿಎಆರ್ 55 ಎಸ್‌ಆರ್‌ಇ 2001ರ ಅಧಿಸೂಚನೆ.
(3) ದಿನಾಂಕ:05-01-2004 ಸಂ.ಮಂವಿ/22/ಸಿಬ್ಬಂದಿ(3)/2001-02 ರಂದು ಮಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ಬರೆದ ಪತ್ರ.

**ಪೀಠಿಕೆ:**

1) ಮಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜಾದ ಮಡಿಕೇರಿಯ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಕಾಲೇಜಿನಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಎಂ.ಪಿ. ಕೃಷ್ಣರವರನ್ನು ದಿನಾಂಕ:22-01-1997 ಸಂ. ಡಿಪಿಎಆರ್ 48 ಎಸ್‌ಆರ್‌ಇ 96ರ ಅಧಿಸೂಚನೆಯಲ್ಲಿ ಪ್ರಕಟಿಸಲಾಗಿರುವ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಕರ್ನಾಟಕ ಶಿಕ್ಷಣ ಇಲಾಖೆಯ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ) (ವಿಶೇಷ) ನಿಯಮಗಳು 1996 ಮತ್ತು ತದನಂತರದ ತಿದ್ದುಪಡಿಗಳನ್ವಯ ಖಾಯಂ ಸೇವೆಯಲ್ಲಿ ವಿಲೀನಗೊಳಿಸುವ ಬಗ್ಗೆ ಮಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗೆ ಕಳುಹಿಸಿದ್ದಾರೆ. ಶ್ರೀ ಎಂ.ಪಿ. ಕೃಷ್ಣರವರು ಮೇಲ್ಕಂಡ ಘಟಕ ಕಾಲೇಜಿನಲ್ಲಿ ಪ್ರಾಣಿಶಾಸ್ತ್ರ ವಿಷಯದ ಅರೆಕಾಲಿಕ ಉಪನ್ಯಾಸಕರಾಗಿ ಕಾಲೇಜಿನಲ್ಲಿ ದಿನಾಂಕ:18.07.1991ರಿಂದ 20-07-1995ರ ಅವಧಿಯಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಅವರು ಎಂ.ಎಸ್ಸಿಯಲ್ಲಿ ಶೇ. 55.52ರಷ್ಟು ಅಂಕಗಳನ್ನು ಪಡೆದಿದ್ದು, ಎನ್‌ಇಟಿ/ ಎಸ್‌ಎಲ್‌ಇಟಿಯನ್ನು ಹೊಂದಿರುವುದಿಲ್ಲ. ಅವರು ಮೀಸಲಾತಿಯ ಪ್ರಕಾರ ಪ್ರವರ್ಗ-1ಕ್ಕೆ-ಸೇರಿರುತ್ತಾರೆ. ಮೇಲ್ಕಂಡ ಘಟಕ ಕಾಲೇಜಿನಲ್ಲಿ ಒಂದು ಪ್ರಾಣಿಶಾಸ್ತ್ರ ಉಪನ್ಯಾಸಕರ ಹುದ್ದೆ ಖಾಲಿ ಇರುವುದಾಗಿ ಕುಲಸಚಿವರು ವರದಿ ಮಾಡಿದ್ದಾರೆ. ಮಂಗಳೂರು ವಿಶ್ವವಿದ್ಯಾಲಯದ ಸಿಂಡಿಕೇಟ್ ಇವರ ಮನವಿಯನ್ನು ಪರಿಗಣಿಸಿದ್ದು, ಲಭ್ಯವಿರುವ ಹುದ್ದೆಯು ಬ್ಯಾಕ್‌ಲಾಗ್ ಹುದ್ದೆ ಅಲ್ಲದಿರುವುದರಿಂದ ಮತ್ತು ಸಾಮಾನ್ಯ ನೇಮಕಾತಿಗೆ ಲಭ್ಯವಿರುವುದರಿಂದ ಶ್ರೀ ಎಂ.ಪಿ. ಕೃಷ್ಣರವರ ಮನವಿಯನ್ನು

ಸರ್ಕಾರದ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ಣಯಿಸಿದೆ. ಈ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಮಂಗಳೂರು ವಿಶ್ವವಿದ್ಯಾಲಯ ಸರ್ಕಾರದ ಮಂಜೂರಾತಿಗೆ ಕಳುಹಿಸಿದೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

2) ಕರ್ನಾಟಕ ಶಿಕ್ಷಣ ಇಲಾಖೆಯ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ) (ವಿಶೇಷ) ನಿಯಮಗಳು 1996ನ್ನು ದಿನಾಂಕ:22-01-1997 ಸಂ.ಡಿಪಿಎಆರ್ 48 ಎಸ್‌ಆರ್‌ಇ 96ರ ಅಧಿಸೂಚನೆಯಲ್ಲಿ ರಾಜ್ಯ ಸರ್ಕಾರವು ಪ್ರಕಟಿಸಿದೆ. ಈ ನಿಯಮಗಳಲ್ಲಿ ಕುವೆಂಪು ವಿಶ್ವವಿದ್ಯಾಲಯ ಮತ್ತು ಮಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳಾಗಿ ಪರಿವರ್ತನೆಗೊಂಡಿರುವ ಶಿವಮೊಗ್ಗದ ಸಹ್ಯಾದ್ರಿ ಕಲಾ ಕಾಲೇಜು ಮತ್ತು ಸಹ್ಯಾದ್ರಿ ವಿಜ್ಞಾನ ಕಾಲೇಜು ಹಾಗೂ ಅಂದಿನ ಮಡಿಕೇರಿಯ ಸರ್ಕಾರಿ ಕಾಲೇಜು ಮತ್ತು ಮಂಗಳೂರಿನ ಕಲಾ ಮತ್ತು ವಿಜ್ಞಾನ ಕಾಲೇಜುಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅರೆಕಾಲಿಕ ಉಪನ್ಯಾಸಕರುಗಳಿಗೂ ಸಹ ಅನ್ವಯವಾಗುತ್ತವೆ. 1994-95ನೇ ಶೈಕ್ಷಣಿಕ ಸಾಲಿನ ಕೊನೆಯ ದಿನಾಂಕದಂದು 2 (ಎರಡು) ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ಅರೆಕಾಲಿಕ ಉಪನ್ಯಾಸಕರು ಈ ನಿಯಮಗಳಡಿಯಲ್ಲಿ ಖಾಯಂ ಸೇವೆಯಲ್ಲಿ ವಿಲೀನಗೊಳ್ಳಲು ಅರ್ಹರಾಗಿರುತ್ತಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಅಭ್ಯರ್ಥಿಗಳಿಗೆ ಒಂದು ಶೈಕ್ಷಣಿಕ ವರ್ಷವನ್ನು ಕನಿಷ್ಟ ಅವಧಿಯನ್ನಾಗಿ ನಿರ್ದಿಷ್ಟಪಡಿಸಲಾಗಿದೆ. ತದನಂತರದಲ್ಲಿ ನಿಯಮಗಳನ್ನು ತಿದ್ದುಪಡಿ ಮಾಡಿ ಎನ್‌ಇಟಿಯನ್ನು ಕಡ್ಡಾಯಗೊಳಿಸಲಾಗಿದ್ದು, ಮೂರು ವರ್ಷಗಳ ಅವಧಿಯಲ್ಲಿ ಎನ್‌ಇಟಿಯಲ್ಲಿ ತೇರ್ಗಡೆ ಹೊಂದಬೇಕೆಂದು ಇಲ್ಲದಿದ್ದಲ್ಲಿ ಅವರನ್ನು ಸೇವೆಯಿಂದ ತೆಗೆದುಹಾಕಲಾಗುವುದೆಂಬ ಷರತ್ತನ್ನು ವಿಧಿಸಲಾಗಿದೆ. ಎನ್‌ಇಟಿ ತೇರ್ಗಡೆ ಹೊಂದದ ಅಭ್ಯರ್ಥಿಗಳು ಯುಜಿಸಿ ವೇತನ ಶ್ರೇಣಿಗೆ ಅರ್ಹರಾಗುವುದಿಲ್ಲ. ಆದ್ದರಿಂದ ಅಂತಹವರನ್ನು ರಾಜ್ಯ ವೇತನ ಶ್ರೇಣಿಯಲ್ಲಿ ಖಾಯಂ ಸೇವೆಯಲ್ಲಿ ನಿಗದಿತ ಅವಧಿಯೊಳಗೆ ಎನ್‌ಇಟಿ/ಎಸ್‌ಎಲ್‌ಇಟಿಯಲ್ಲಿ ತೇರ್ಗಡೆಹೊಂದಬೇಕೆಂಬ ಷರತ್ತನ್ನು ವಿಧಿಸಿ ಖಾಯಂ ಸೇವೆಯಲ್ಲಿ ವಿಲೀನಗೊಳಿಸಬೇಕಾಗುತ್ತದೆ. ಅರೆಕಾಲಿಕ ಉಪನ್ಯಾಸಕರಾದ ಶ್ರೀ ಎಂ.ಪಿ. ಕೃಷ್ಣರವರ ಅರೆಕಾಲಿಕ ಸೇವೆಯನ್ನು ಸಕ್ರಮಗೊಳಿಸುವ ವಿಚಾರದಲ್ಲಿ ಸದರಿ ಕಾಲೇಜಿನ ಪ್ರಾಂಶುಪಾಲರು ನೀಡಿರುವ ಸೇವಾ ಪ್ರಮಾಣ ಪತ್ರವನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಈ ಪ್ರಮಾಣ ಪತ್ರದ ಪ್ರಕಾರ ಶ್ರೀಯುತರು 1991-92ರಿಂದ 1995-96ನೇ ಸಾಲಿನವರೆಗೆ ಒಟ್ಟಾರೆ ಐದು ಶೈಕ್ಷಣಿಕ ವರ್ಷಗಳು ಯಾವುದೇ ಸೇವಾ ವಿಚ್ಛಿನ್ನತೆ ಇಲ್ಲದೇ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸಿರುವುದು ಕಂಡುಬರುತ್ತದೆ. ಆದ್ದರಿಂದ ಮೇಲ್ಕಂಡ ನಿಯಮಗಳಲ್ಲಿ ನಿರ್ದಿಷ್ಟಪಡಿಸಿರುವಂತೆ 1994-95ನೇ ಶೈಕ್ಷಣಿಕ ವರ್ಷದ ಕೊನೆಯ ದಿನಾಂಕದಂದು ಎರಡು ವರ್ಷಗಳಿಗೆ ಕಡಿಮೆ ಇಲ್ಲದಂತೆ ಅರೆಕಾಲಿಕ ಉಪನ್ಯಾಸಕರಾಗಿ ಸದರಿಯವರು ಸೇವೆ ಸಲ್ಲಿಸಿದ್ದು, ಈ ಷರತ್ತನ್ನು ಪೂರೈಸಿದ್ದಾರೆ. ಇವರು ಎಂ.ಎಸ್ಸಿಯಲ್ಲಿ ಶೇ. 55.52ರಷ್ಟು ಅಂಕಗಳನ್ನು ಗಳಿಸಿದ್ದು, ಎನ್‌ಇಟಿ/ ಎಸ್‌ಎಲ್‌ಇಟಿಯಲ್ಲಿತೇರ್ಗಡೆ ಹೊಂದಿಲ್ಲದಿರುವುದು ಕಂಡುಬಂದಿದೆ. ಆದ್ದರಿಂದ ಅವರು ಯುಜಿಸಿ ವೇತನ ಶ್ರೇಣಿಗೆ ಅರ್ಹತೆ ಹೊಂದಿಲ್ಲ. ಆದರೆ ಅವರು ಖಾಯಂ ಸೇವೆಯಲ್ಲಿ ವಿಲೀನಗೊಳಿಸಲು ಇವರು ಅರ್ಹತೆ ಹೊಂದಿರುವುದರಿಂದ ರಾಜ್ಯ ವೇತನ ಶ್ರೇಣಿಯಾದ ರೂ. 6,000-11,200ರಲ್ಲಿ ನಿರ್ದಿಷ್ಟಪಡಿಸಿರುವ ಅವಧಿಯೊಳಗೆ ಯುಜಿಸಿಯ ಅರ್ಹತೆಯಾದ ಎನ್‌ಇಟಿ/ ಎಸ್‌ಎಲ್‌ಇಟಿಯನ್ನು ಪಾಸು ಮಾಡಬೇಕೆಂದು, ಇಲ್ಲದಿದ್ದಲ್ಲಿ ಸೇವೆಯಿಂದ ತೆಗೆದುಹಾಕಲಾಗುವುದೆಂಬ ಷರತ್ತನ್ನು ವಿಧಿಸಿ ಖಾಯಂ ಸೇವೆಯಲ್ಲಿ ವಿಲೀನಗೊಳಿಸುವ ಕುರಿತಂತೆ ಸರ್ಕಾರವು ಪರಿಶೀಲಿಸಿದೆ. ಅಂತೆಯೇ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂ. ಇಡಿ 170 ಯುಡಿವಿ 2004, ಬೆಂಗಳೂರು, ದಿನಾಂಕ:16ನೇ ಮೇ 2005**

1) ಪೀಠಿಕೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ ಮಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜಾದ ಮಡಿಕೇರಿಯ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಕಾಲೇಜಿನಲ್ಲಿ 1991-92ರಿಂದ 1995-96ನೇ ಸಾಲಿನವರೆಗೆ ಪ್ರಾಣಿಶಾಸ್ತ್ರ ವಿಷಯದಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಯಾವುದೇ ಸೇವಾ ವಿಚ್ಛಿನ್ನತೆ ಇಲ್ಲದೆ ಒಟ್ಟಾರೆ ಐದು ಶೈಕ್ಷಣಿಕ ವರ್ಷಗಳು ಸೇವೆ ಸಲ್ಲಿಸಿ ಮತ್ತು 1994-95ನೇ ಶೈಕ್ಷಣಿಕ ಸಾಲಿನ ವರ್ಷದ ಕೊನೆಯ ದಿನಾಂಕದಂದು ಎರಡು ವರ್ಷಗಳಿಗೆ ಕಡಿಮೆ ಇಲ್ಲದಂತೆ ಪ್ರಾಣಿಶಾಸ್ತ್ರ ವಿಷಯದ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸಿರುವ ಶ್ರೀ ಎಂ.ಪಿ. ಕೃಷ್ಣರವರು ತಾತ್ಕಾಲಿಕ ಸೇವೆಯಿಂದ ವಿಲೀನಿಕರಣ ಹೊಂದಲು ಎಲ್ಲ ಅರ್ಹತೆಗಳನ್ನು ಹೊಂದಿರುವುದರಿಂದ ಸದರಿಯವರ ತಾತ್ಕಾಲಿಕ ಸೇವೆಯನ್ನು ಕರ್ನಾಟಕ ಶಿಕ್ಷಣ ಇಲಾಖೆಯ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ) (ವಿಶೇಷ) ನಿಯಮಗಳು 1996 ಮತ್ತು ತದನಂತರದ ತಿದ್ದುಪಡಿಗಳನ್ವಯ ಮಡಿಕೇರಿಯ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ (ಇಂದಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜು) ಕಾಲೇಜಿನಲ್ಲಿ ಖಾಲಿ ಇರುವ ಪ್ರಾಣಿಶಾಸ್ತ್ರ ಉಪನ್ಯಾಸಕರ ಹುದ್ದೆ (ಸಾಮಾನ್ಯ)ಯ ಎದುರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ವಿಲೀನಿಕರಣಗೊಳಿಸಲು ರಾಜ್ಯ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಈ ವಿಲೀನಿಕರಣವು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

**ಷರತ್ತುಗಳು:-**

(1) ಈ ವಿಲೀನೀಕರಣವು ಕಟ್ಟುನಿಟ್ಟಾಗಿ ಕರ್ನಾಟಕ ಶಿಕ್ಷಣ ಇಲಾಖೆಯ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ) (ವಿಶೇಷ) ನಿಯಮಗಳು 1996ರನ್ವಯ ಇರತಕ್ಕದ್ದು, ಮತ್ತು ತದನಂತರದ ತಿದ್ದುಪಡಿಗಳಲ್ಲಿ ವಿಧಿಸಿರುವ ಷರತ್ತುಗಳಿಗೆ ಒಳಪಟ್ಟಿದೆ.

(2) ಶ್ರೀ ಎಂ.ಪಿ. ಕೃಷ್ಣರವರು ಎನ್‌ಇಟಿ/ಎಸ್‌ಎಲ್‌ಇಟಿಯಲ್ಲಿ ತೇರ್ಗಡೆ ಹೊಂದಿಲ್ಲದೇ ಇರುವುದರಿಂದ ಅವರು ಯುಜಿಸಿ ವೇತನ ಶ್ರೇಣಿಗೆ ಅರ್ಹರಲ್ಲ. ಆದರೆ ರಾಜ್ಯ ವೇತನ ಶ್ರೇಣಿಯಾದ ರೂ. 6,000-11,200ರ ವೇತನ ಶ್ರೇಣಿಯಲ್ಲಿ ಅವರ ವೇತನವನ್ನು ನಿಗದಿಗೊಳಿಸತಕ್ಕದ್ದು;

(3) ಯುಜಿಸಿಯು ಎನ್‌ಇಟಿ ಪಾಸುಮಾಡುವ ಸಂಬಂಧದಲ್ಲಿ ನೀಡಿರುವ ವಿನಾಯಿತಿ ಸೇರಿದಂತೆ ಯುಜಿಸಿ ಪರಿನಿಯಮಾವಳಿಗಳಲ್ಲಿ ನಿರ್ದಿಷ್ಟಪಡಿಸಿದ ಅರ್ಹತೆಯನ್ನು ಶ್ರೀ ಎಂ.ಪಿ. ಕೃಷ್ಣರವರು ಪೂರೈಸಿದ ನಂತರ ಅವರ ವೇತನವನ್ನು ರೂ.8,000-13,500ರ ಯುಜಿಸಿ ವೇತನ ಶ್ರೇಣಿಯಲ್ಲಿ ನಿಗದಿಗೊಳಿಸತಕ್ಕದ್ದು;

(4) ನಾನ್-ಎನ್ಇಟಿ/ಎಸ್ಎಲ್ಇಟಿ ಅಭ್ಯರ್ಥಿಗಳನ್ನು ರೂ. 6,000-11,200ರ ರಾಜ್ಯ ವೇತನ ಶ್ರೇಣಿಯಲ್ಲಿ ವಿಲೀನೀಕರಣಗೊಳಿಸತಕ್ಕದ್ದು. ಆದರೆ ಅಂತಹ ಅಭ್ಯರ್ಥಿಯು ಅರ್ಹತಾ ಪರೀಕ್ಷೆಯಲ್ಲಿ ಕನಿಷ್ಟ ಶೇ. 55ರಷ್ಟು ಅಂಕಗಳನ್ನು ತಪ್ಪದೇ ಹೊಂದಿರತಕ್ಕದ್ದು.

(5) ವಿಲೀನಗೊಂಡ ಅರೆಕಾಲಿಕ ಉಪನ್ಯಾಸಕರುಗಳು ಎನ್ಇಟಿ/ಎಸ್ಎಲ್ಇಟಿ ಪಾಸುಮಾಡಲು ದಿನಾಂಕ:09.07.2005ರವರೆಗೆ ಕಾಲಾವಕಾಶ ನೀಡಲಾಗಿದೆ. ಈ ಅವಧಿಯಲ್ಲಿ ಅವರು ಎನ್ಇಟಿ/ಎಸ್ಎಲ್ಇಟಿಯನ್ನು ಪಾಸು ಮಾಡಿದ್ದಲ್ಲಿ ಅವರು ಇತರ ಅರ್ಹ ಉಪನ್ಯಾಸಕರಿಗೆ ಲಭ್ಯವಾಗುವ ಯುಜಿಸಿ ವೇತನ ಶ್ರೇಣಿ ಪಡೆಯಲು ಅರ್ಹರಾಗುತ್ತಾರೆ. ಅವರು ಎನ್ಇಟಿ/ಎಸ್ಎಲ್ಇಟಿಯನ್ನು ನಿಗದಿತ ಅವಧಿಯೊಳಗೆ ಪಾಸು ಮಾಡದಿದ್ದಲ್ಲಿ ಇವರನ್ನು ಭಾರತದ ಸರ್ವೋಚ್ಛ ನ್ಯಾಯಾಲಯವು ಎಸ್ಎಲ್ಪಿ (ಸಿವಿಲ್) ಸಂ. 5991/99ಕ್ಕೆ ಸಂಬಂಧಿಸಿದಂತೆ ಸಿವಿಲ್ ಅಪೀಲ್ ನಂ. 27/2001ರ ಮೇಲೆ ದಿನಾಂಕ:04.01.2001 ರಂದು ನೀಡಿದ ತೀರ್ಪಿನನ್ವಯ ಸೇವೆಯಿಂದ ತೆಗೆದು ಹಾಕಲಾಗುವುದು.

(6) ಶ್ರೀ ಎಂ.ಪಿ. ಕೃಷ್ಣರವರು ಪರಿವೀಕ್ಷಣಾ ಅವಧಿಯಲ್ಲಿ 1974ರ ಕ.ಸ.ಸೇ (ಸೇವಾ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಾವಳಿಗಳಲ್ಲಿನಿಗದಿಪಡಿಸಿರುವ ಕನ್ನಡ ಭಾಷಾ ಮತ್ತು ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು. ಹಾಗೆಯೇ ಇವರು ಒಂದು ತಿಂಗಳ ಓರಿಯೆಂಟೇಷನ್ ಕೋರ್ಸ್ ತರಬೇತಿಯನ್ನು ಕಡ್ಡಾಯವಾಗಿ ಪೂರ್ಣಗೊಳಿಸತಕ್ಕದ್ದು.

(7) ಇವರ ಸೇವಾ ಜೇಷ್ಠತೆ ಮೀಸಲಾತಿ ಮತ್ತು ಅರೆಕಾಲಿಕ ಉಪನ್ಯಾಸಕರುಗಳ ಇಂಟರ್-ಸೇ-ಜೇಷ್ಠತಾ ಪಟ್ಟಿಯನ್ನು ಸಿದ್ಧಪಡಿಸಿ ಪರಿಷ್ಕರಿಸುವ ಬದಲಾವಣೆಗೆ ಒಳಪಟ್ಟಿರುತ್ತದೆ.

(8) ಇವರ ನೇಮಕಾತಿಯು ಅರೆಕಾಲಿಕ ಉಪನ್ಯಾಸಕರುಗಳ ಸೇವಾ ವಿಲೀನತೆ ಬಗ್ಗೆ ಬಾಕಿ ಇರುವ/ಉದ್ಭವಿಸಲಿರುವ ನ್ಯಾಯಾಲಯದ ತಕರಾರುಗಳಲ್ಲಿ ನ್ಯಾಯಾಲಯಗಳು ನೀಡಲಿರುವ ತೀರ್ಪಿಗೆ ಬದ್ಧವಾಗಿರುವ ಷರತ್ತಿಗೆ ಒಳಪಟ್ಟಿರುತ್ತದೆ.

(9) ಮಡಿಕೇರಿಯ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಕಾಲೇಜು (ಇಂದಿನ ಸರ್ಕಾರಿ ಕಾಲೇಜು)ನ ಪ್ರಾಂಶುಪಾಲರು ಶ್ರೀ ಎಂ.ಪಿ. ಕೃಷ್ಣರವರ ವಿದ್ಯಾರ್ಹತೆ, ಜನ್ಮ ದಿನಾಂಕ: ಜಾತಿ/ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

(10) ಮೀಸಲಾತಿ ವರ್ಗದಲ್ಲಿ ನೇಮಕಾತಿಗೊಂಡಿರುವ ಅರೆಕಾಲಿಕ ಉಪನ್ಯಾಸಕರುಗಳು ತಮ್ಮ ಜಾತಿ ದೃಢೀಕರಣದ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಜಾರಿ ಸಿಂಧುತ್ವ ಪ್ರಮಾಣ ಪತ್ರವನ್ನು ಕರ್ತವ್ಯ ವರದಿ ಸಲ್ಲಿಸುವಾಗ ಹಾಜರುಪಡಿಸತಕ್ಕದ್ದು ಎಂಬ ಷರತ್ತನ್ನು ತಪ್ಪದೇ ಪಾಲಿಸಬೇಕು;.

(11) ವಿಲೀನಗೊಂಡ ತಾತ್ಕಾಲಿಕ ಉಪನ್ಯಾಸಕರ ಇಂಟರ್-ಸೇ-ಜೇಷ್ಠತೆಯನ್ನು ಅವರುಗಳು ತಾತ್ಕಾಲಿಕ ಉಪನ್ಯಾಸಕರುಗಳಾಗಿ ಸೇವೆಗೆ ಸೇರಿದ ದಿನಾಂಕವನ್ನು ಉಲ್ಲೇಖವಾಗಿಟ್ಟುಕೊಂಡು ಜೇಷ್ಠತೆಯನ್ನು ನಿರ್ಧರಿಸುವ ಇತರೆ ಅಂಶಗಳನ್ನು ಗಣನೆಗೆ ತೆಗೆದುಕೊಂಡು ನಿರ್ಧರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 797

**ಸುಂದರ ರಾಜ ಗುಪ್ತ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** 2005-06 ನೇ ಸಾಲಿಗೆ ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ವಿಶಿಷ್ಠ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ರಾಜೀವ್ ಗಾಂಧಿ ಪರಿಸರ ಪ್ರಶಸ್ತಿ ಪ್ರದಾನ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ. ಅಪಜೀ 20 ಇಎನ್‌ಜಿ 2003 ದಿನಾಂಕ.14-5-2003.
2. ಸರ್ಕಾರದ ಆದೇಶ ಸಂಖ್ಯೆ. ಅಪಜೀ 20 ಇಎನ್‌ಜಿ 2003 ದಿನಾಂಕ.10-5-2004.
3. ದಿನಾಂಕ . 1.5.2005 ರ ಪತ್ರಿಕಾ ಪ್ರಕಟಣೆ.
4. ಸರ್ಕಾರದ ಆದೇಶ ಸಂಖ್ಯೆ. ಅಪಜೀ 27 ಇಎನ್‌ಜಿ 2005 (ಭಾ) ದಿನಾಂಕ.1-6-2005
5. ದಿನಾಂಕ.1-6-2005 ರ ಆಯ್ಕೆ ಸಮಿತಿ ನಡವಳಿ

**ಪ್ರಸ್ತಾವನೆ:**

2005-06 ನೇ ಸಾಲಿನಲ್ಲಿ ರಾಜೀವ್‌ಗಾಂಧಿ ಪರಿಸರ ಪ್ರಶಸ್ತಿಗೆ ಉಲ್ಲೇಖ (3) ರ ಪತ್ರಿಕಾ ಪ್ರಕಟಣೆ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಪರಿಸರ ಸಂರಕ್ಷಣೆಗಾಗಿ ವ್ಯಕ್ತಿ ಮತ್ತು ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವುದು ಪ್ರಶಸ್ತಿಯ ಉದ್ಧೇಶ. ಈ ಪ್ರಶಸ್ತಿ ತಲಾ ರೂ. 1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ರಾಜೀವ್‌ಗಾಂಧಿ ಪರಿಸರ ಪ್ರಶಸ್ತಿಯನ್ನು ವ್ಯಕ್ತಿ ಮತ್ತು ಸಂಸ್ಥೆಗಳು (ಸರ್ಕಾರಿ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ, ಟ್ರಸ್ಟ್‌ಗಳು ಇತರೆ) (1) ಪರಿಸರ ಸಂರಕ್ಷಣೆ ಮತ್ತು (2) ಪರಿಸರ ವ್ಯವಸ್ಥಾಪನೆ ಮತ್ತು ಕ್ಷೇತ್ರಗಳಲ್ಲಿ ಆರಂಭಶೀಲತೆ / ಕೊಡುಗೆ/ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ಈ ಪ್ರಶಸ್ತಿಗಳನ್ನು ರಾಜ್ಯದ ಮಲೆನಾಡು ಕರಾವಳಿ, ಹಳೆ ಮೈಸೂರು, ಹೈದರಾಬಾದ್ – ಕರ್ನಾಟಕ, ಮುಂಬೈ– ಕರ್ನಾಟಕ ಮತ್ತು ಬೆಂಗಳೂರು (ನಗರ ಮತ್ತು ಗ್ರಾಮೀಣ ಜಿಲ್ಲೆಗಳು) ಪ್ರದೇಶಗಳಲ್ಲಿ ಅಸಾಧಾರಣ ಸೇವೆ ಸಲ್ಲಿಸಿರುವವರಿಗೆ ಪ್ರದಾನ ಮಾಡಲಾಗುವುದು. ರಾಜ್ಯದ ಮೇಲೆ

ಸೂಚಿಸಲಾದ ಪ್ರದೇಶಗಳಿಗೆ ಒಂದೊಂದಕ್ಕೆ ಎರಡು ಪ್ರಶಸ್ತಿಗಳನ್ನು ಅಂದರೆ ಒಂದನ್ನು ವ್ಯಕ್ತಿಗಳ ವರ್ಗ ಮತ್ತು ಇನ್ನೊಂದನ್ನು ಸಂಸ್ಥೆಗಳ ವರ್ಗದಲ್ಲಿ ನೀಡಲು ಪರಿಶೀಲಿಸಿದೆ. ಸಮಗ್ರ ರಾಜ್ಯದಲ್ಲಿ ಒಟ್ಟಾರೆ ಹನ್ನೆರಡು ಪ್ರಶಸ್ತಿಗಳನ್ನು ನೀಡಲಾಗುವುದು. ಉಲ್ಲೇಖ (2) ರಲ್ಲಿನ ಸರ್ಕಾರದ ಆದೇಶದನ್ವಯ ಪ್ರಶಸ್ತಿಗಾಗಿ ಅರ್ಹರನ್ನು ಆಯ್ಕೆ ಮಾಡುವ ಸಲುವಾಗಿ ಆಯ್ಕೆ ಸಮಿತಿಯನ್ನು ರಚಿಸಲು ಪ್ರಸ್ತಾವನೆಯನ್ನು ಪರಿಶೀಲಿಸಿ, ಉಲ್ಲೇಖ (4)ರಲ್ಲಿನ ಸರ್ಕಾರದ ಆದೇಶದನ್ವಯ ಪ್ರಶಸ್ತಿಗಾಗಿ ಅರ್ಹರನ್ನು ಆಯ್ಕೆ ಮಾಡುವ ಸಲುವಾಗಿ ಆಯ್ಕೆ ಸಮಿತಿಯನ್ನು ರಚಿಸಲಾಗಿದೆ. ಉಲ್ಲೇಖ (5)ರಲ್ಲಿ ನಮೂದಿಸಿರುವಂತೆ ಆಯ್ಕೆ ಸಮಿತಿಯ ಶಿಫಾರಸ್ಸನ್ನು ಸರ್ಕಾರ ಸ್ವೀಕರಿಸಿದೆ. ಸರ್ಕಾರವು ಆಯ್ಕೆ ಸಮಿತಿಯ ಶಿಫಾರಸ್ಸನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಅಪಜೀ 27 ಇಎನ್‌ಜಿ 2005 (ಭಾ) ಬೆಂಗಳೂರು, ದಿನಾಂಕ.03ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳಿಗೆ 2005-06 ನೇ ಸಾಲಿನಲ್ಲಿ ರಾಜೀವ್ ಗಾಂಧಿ ಪರಿಸರ ಪ್ರಶಸ್ತಿ ನೀಡಲು ಆಯ್ಕೆ ಸಮಿತಿಯು ಮಾಡಿರುವ ಶಿಫಾರಸ್ಸುಗಳನ್ನು ಪರಿಶೀಲಿಸಿದ ನಂತರ ಸರ್ಕಾರ ಈ ಕೆಳ ಕಾಣಿಸಿದ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ರಾಜೀವ್‌ಗಾಂಧಿ ಪರಿಸರ ಪ್ರಶಸ್ತಿ ಪ್ರದಾನ ಮಾಡಿದೆ. ಸದರಿ ಪ್ರಶಸ್ತಿಯು ರೂ.1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ನಗದು ಮತ್ತು ಪ್ರಶಸ್ತಿ ಪತ್ರ ಒಳಗೊಂಡಿರುತ್ತದೆ.

| ಕ್ರಮ ಸಂಖ್ಯೆ. | ಪ್ರದೇಶ | ವ್ಯಕ್ತಿ<br>ಶ್ರೀ/ಶ್ರೀಮತಿ | ಸಂಸ್ಥೆ |
|---|---|---|---|
| 1. | ಬೆಂಗಳೂರು<br>(ಗ್ರಾಮಾಂತರ ಮತ್ತು ನಗರ) | ಡಾ. ಹೆಚ್.ಕೆ.ರಾಮರಾಜು,<br>ಪ್ರೊಫೆಸರ್,ಸಿವಿಲ್‌ಇಂಜಿನಿಯರಿಂಗ್ ವಿಭಾಗ,<br>ದಯಾನಂದ ಸಾಗರ್<br>ಇಂಜಿನಿಯರಿಂಗ್ ಕಾಲೇಜು,<br>ಕುಮಾರಸ್ವಾಮಿ ಲೇ ಔಟ್<br>ಬೆಂಗಳೂರು –560 078. | ಇಕೋ–ವಾಚ್,<br>403, 18 ನೇ ಅಡ್ಡ ರಸ್ತೆ,<br>3ನೇ ಬ್ಲಾಕ್, ಜಯನಗರ,<br>ಬೆಂಗಳೂರು 560 011. |
| 2. | ಹಳೆ ಮೈಸೂರು | ಶ್ರೀಮತಿ. ಡಿ. ನಂದ,<br>ನಂ. ಎಲ್–78, 1ನೇ ಹಂತ,<br>ಕುವೆಂಪು ನಗರ, ಮೈಸೂರು– 570 023. | ಮೈಸೂರು ಮಹಾ ನಗರ ಪಾಲಿಕೆ,<br>ಹೊಸ ಸಯ್ಯಾಜಿರಾವ್ ರಸ್ತೆ,<br>ಮೈಸೂರು– 570 024 |
| 3. | ಮುಂಬೈ–ಕರ್ನಾಟಕ | ಶ್ರೀ. ಪುಂಡಲೀಕ ವಿ. ಹುಗ್ಗಿ,<br>ಉದಯ ರವಿ, ಸಂಸ್ಥಾಪನಾ ಕಾರ್ಯದರ್ಶಿ,<br>ಉದ್ಯಾನ ಮತ್ತು ಪರಿಸರ ಅಭಿವೃದ್ಧಿ ಸಂಘ,<br>ನಂ.46, ಗುರುದೇವ ನಗರ,<br>ರಾಜ ನಗರ ಹುಬ್ಬಳ್ಳಿ 580 032. | ಕಸ್ತೂರ ಬಾ ಶಿಕ್ಷಣ ಮತ್ತು ಗ್ರಾಮೀಣ<br>ಅಭಿವೃದ್ಧಿ ಸಂಸ್ಥೆ, (ಕೆ.ಇ.ಆರ್.ಡಿ.ಎಸ್)<br>ಯಾನಮ್ ಪೇಟೆ, ರಾಮದುರ್ಗ– 591 123<br>ಬೆಳಗಾವಿ ಜಿಲ್ಲೆ. |
| 4. | ಹೈದರಾಬಾದ್ –<br>ಕರ್ನಾಟಕ | ಶ್ರೀ ಶೈಲೇಂದ್ರ ಗದಗೆಪ್ಪ ಕಾವಡಿ<br>ನಂ. 13-172, ಆನಂದ ಸ್ವಾಮಿ ರಸ್ತೆ,<br>ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ. | ಪರಿಸರ ಜನಜಾಗೃತಿ ಸಂಘ (ರಿ) ಕೇರ್ ಆಫ್<br>ನಂ.ಬಿ– 1/3, ದೂರದರ್ಶನ ಸ್ಟಾಫ್<br>ಕ್ವಾರ್ಟರ್ಸ್, ಹುಮ್ನಾಬಾದ್ ರಸ್ತೆ,<br>ಗುಲ್ಬರ್ಗಾ– 585 104. |
| 5. | ಮಲೆನಾಡು ಪ್ರದೇಶ | – | ಕೂರ್ಗ್ ವೈಲ್ಡ್ ಲೈಫ್ ಸೊಸೈಟಿ,<br>ಅಂಚೆ ಪೆಟ್ಟಿಗೆ ನಂ. 111,<br>ಡಿಎಫ್‌ಓ ಕ್ವಾರ್ಟರ್ಸ್ ಹತ್ತಿರ,<br>ಚೇನ್ ಗೇಟ್, ಮಡಕೇರಿ 571 201.<br>ಕೊಡಗು ಜಿಲ್ಲೆ. |
| 6. | ಕರಾವಳಿ ಪ್ರದೇಶ | ಡಾ. ರವೀಂದ್ರ ನಾಥ ಐತಾಳ್, ರಾಘವೇಂದ್ರ ಮಠದ ಎದುರು, ಕಲ್ಲಾರೆ, ಪುತ್ತೂರು 574 301 ದ.ಕ.ಜಿಲ್ಲೆ. | ನಾಗರಿಕ ಸೇವಾ ಟ್ರಸ್ಟ್<br>ಅಂಚೆ : ಗುರುವಾಯನ ಕೆರೆ 574 217.<br>ಬೆಳ್ತಂಗಡಿ ತಾಲ್ಲೂಕು ದ.ಕ.ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತುಅವರ ಹೆಸರಿನಲ್ಲಿ,

ಪಿ.ಆರ್. 798

**ಎನ್.ಆರ್. ಜಗನ್ನಾಥ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2005-06ನೇ ಸಾಲಿಗೆ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಸೇವಾನಿರತ ವೈದ್ಯರನ್ನು ಆಯ್ಕೆಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಆಕುಕ 399 ಹೆಚ್‌ಎಸ್‌ಹೆಚ್ 2005 ದಿನಾಂಕ: 29-4-2005.
2. ಕುಲಸಚಿವರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಇವರ ಪತ್ರ ಸಂ: ಪಿಜಿಇಟಿ 6/ ಸಿಒಯುಎನ್/2005-06 ದಿನಾಂಕ: 2-6-2005.
3. ಆಯುಕ್ತರು, ಆಕುಕ ಸೇವೆಗಳು ಇವರ ಪತ್ರ ಸಂಖ್ಯೆ: ಜೆಆರ್‌ಬಿ (ಎಂ):2004-05 ದಿನಾಂಕ: 6-06-2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಕೃತ ಜ್ಞಾಪನದಲ್ಲಿ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಇವರು ಮೊದಲನೇ ಸುತ್ತಿನಲ್ಲಿ 88 ಜನ ಸೇವಾನಿರತ ವೈದ್ಯಾಧಿಕಾರಿಗಳನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಮಾಡಿದ್ದು ಅದರಂತೆ ಆದೇಶ ಹೊರಡಿಸಲಾಗಿದೆ. ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ **ಕರ್ನಾಟಕ ವೈದ್ಯಕೀಯ ಕಾಲೇಜು** ಮತ್ತು **ದಂತ ಕಾಲೇಜು** (ಸ್ನಾತಕೋತರ ಕೋರ್ಸ್‌ಗಳಿಗೆ ಆಯ್ಕೆ), ನಿಯಮಗಳು 1987ರ ಪ್ರಕಾರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಮತ್ತು ಸ್ವಾಯತ್ತ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸೇವಾನಿರತ ವೈದ್ಯರುಗಳು 2005-06ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಅರ್ಜಿ ಸಲ್ಲಿಸಿ, ಕುಲಸಚಿವರು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬೆಂಗಳೂರು, ಇವರು ಸಲ್ಲಿಸಿರುವ 2 ನೇ ಆಯ್ಕೆ ಪಟ್ಟಿಯಂತೆ ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆಯಲ್ಲಿ ಬಹುತೇಕ ವೈದ್ಯಾಧಿಕಾರಿಗಳು ವಿಷಯ ಹಾಗೂ ಸ್ಥಳ ಬದಲಾವಣೆಯನ್ನು ಹೊಂದಿರುತ್ತಾರೆ. ಹಾಗೂ ಹೆಚ್ಚುವರಿಯಾಗಿ ಆಯ್ಕೆಗೊಂಡಿರುವ ವೈದ್ಯಾಧಿಕಾರಿಗಳಾಗಿರುವುದರಿಂದ ಈ ವೈದ್ಯರುಗಳಿಗೆ ಪರಿಷ್ಕೃತ ಆದೇಶ ಹೊರಡಿಸಬೇಕಾಗುತ್ತದೆ ಎಂದು ತಿಳಿಸುತ್ತಾ, ಸದರಿ ಅಧಿಕೃತ ಜ್ಞಾಪನವನ್ನು ರದ್ದುಪಡಿಸಿ ಪರಿಷ್ಕೃತ ಆದೇಶವನ್ನು ಹೊರಡಿಸುವಂತೆ ಪ್ರಸ್ತಾಪಿಸಿರುತ್ತಾರೆ.

ಸರ್ಕಾರವು ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಹಾಗೂ ಕುಲಸಚಿವರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನ ವಿಶ್ವವಿದ್ಯಾಲಯ, ಬೆಂಗಳೂರು ಇವರುಗಳ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಸರ್ಕಾರಿ ಅಧಿಕೃತ ಜ್ಞಾಪನ ಸಂಖ್ಯೆ: ಆಕುಕ 399 ಹೆಚ್‌ಎಸ್‌ಹೆಚ್ 2005 ದಿನಾಂಕ: 29-4-2005 ನ್ನು ಭಾಗಶಃ ಮಾರ್ಪಡಿಸಿ ಷರತ್ತಿಗೊಳಪಟ್ಟು ಈ ಆದೇಶದ ಅನುಬಂಧದಲ್ಲಿರುವ ಅವರ ಹೆಸರಿನ ಮುಂದೆ ನಮೂದಿಸಿರುವ ಕೋರ್ಸ್ ಮತ್ತು ಕಾಲೇಜುಗಳಿಗೆ ಆಯ್ಕೆ ಮಾಡಿ ಆದೇಶ ಹೊರಡಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 399 ಹೆಚ್‌ಎಸ್‌ಹೆಚ್, 2005, ಬೆಂಗಳೂರು, ದಿನಾಂಕ: 15ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆಕುಕ 399 ಹೆಚ್‌ಎಸ್‌ಹೆಚ್ 2005 ದಿನಾಂಕ: 29-4-2005 ನ್ನು ಭಾಗಶಃ ಮಾರ್ಪಡಿಸಿ, 2005-06 ನೇ ಸಾಲಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ 94 ಸೇವಾನಿರತ ವೈದ್ಯಾಧಿಕಾರಿಗಳನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಲು ಈ ಆದೇಶದ ಅನುಬಂಧದಲ್ಲಿನ ಅವರ ಹೆಸರಿನ ಮುಂದೆ ನಮೂದಿಸಿರುವ ಕೋರ್ಸು ಮತ್ತು ಕಾಲೇಜುಗಳಿಗೆ ಪ್ರವೇಶ ಪಡೆಯಲು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಅನುಮತಿಸಿದೆ.

1. ಕರ್ನಾಟಕ ಸರ್ಕಾರಿ ಸೇವಾ ನಿಯಮ 7ರ ಅನುಬಂಧ-1 ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಸೇವಾನಿರತ ವೈದ್ಯರುಗಳಿಗೆ ಪ್ರತಿ ನಿಯೋಜನ ಸೌಲಭ್ಯವಿರುತ್ತದೆ. ಪ್ರಥಮ ಬಾರಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾನಿರತ ವೈದ್ಯರುಗಳು ಅವರುಗಳು ಆಯ್ಕೆ ಮಾಡಿರುವ ಕೋರ್ಸ್ ಮತ್ತು ಕಾಲೇಜಿನಲ್ಲಿ ಆಯ್ಕೆಯಾಗಿರುವ ವೈದ್ಯಾಧಿಕಾರಿಗಳು ಆಫಿಡವಿಟ್ ಫಾರಂ-ಎ ಯನ್ನು ಭರ್ತಿಮಾಡಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳಿಗೆ : ಮೇಲಾಧಿಕಾರಿಗಳಿಗೆ ಸಲ್ಲಿಸತಕ್ಕದ್ದು.
2. ಅಲ್ಲದೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಮತ್ತು ಸಂಬಂಧಿಸಿದ ಮೇಲಾಧಿಕಾರಿಗಳು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗಧಿಪಡಿಸಿರುವಂತೆ ನಮೂನೆ-19 ಅಥವಾ 19-ಎ ರನ್ವಯ ಬಾಂಡ್ ಅನ್ನು ಪಡೆಯುವುದು.
3. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ಅಥವಾ ಸಂಬಂಧಿಸಿದ ಮೇಲಾಧಿಕಾರಿಗಳು ಅಫಿಡವಿಟ್ ಮತ್ತು ಬಾಂಡ್‌ಗಳನ್ನು ಪಡೆದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರಿಗೆ ಕಳುಹಿಸತಕ್ಕದ್ದು, ಯಾವುದೇ ಕಾರಣಕ್ಕೂ ಮೇಲಿನ ದಾಖಲಾತಿಗಳನ್ನು ಪಡೆಯದೇ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಅಭ್ಯರ್ಥಿಗಳನ್ನು ಪ್ರಸ್ತುತ ಕರ್ತವ್ಯದಿಂದ ಬಿಡುಗಡೆ ಮಾಡಿದಲ್ಲಿ ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ/ಮೇಲಾಧಿಕಾರಿಗಳು ಸರ್ಕಾರ ತೆಗೆದುಕೊಳ್ಳುವ ಕ್ರಮಕ್ಕೆ ನೇರ ಹೊಣೆಗಾರರಾಗುತ್ತಾರೆ.
4. ಈ ಸರ್ಕಾರಿ ಆದೇಶದ ಅನುಬಂಧದಲ್ಲಿ ತಿಳಿಸಿರುವ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾ ನಿರತ ವೈದ್ಯರು ಸ್ನಾತಕೋತ್ತರ ಕೋರ್ಸ್‌ಗೆ ಪ್ರವೇಶ ಪಡೆದ ನಂತರ ಸರ್ಕಾರ ಪರಿಶೀಲಿಸಿ ಪ್ರತ್ಯೇಕವಾಗಿ ವ್ಯಾಸಂಗದ ರಜೆ ಅಥವಾ ಪ್ರತಿ ನಿಯೋಜನಾ ರಿಯಾಯಿತಿ ಸೌಲಭ್ಯ ಮಂಜೂರು ಮಾಡಲು ಕ್ರಮ ತೆಗೆದುಕೊಳ್ಳುವುದು. ಸ್ನಾತಕೋತರ ಕೋರ್ಸ್‌ನ ಪ್ರವೇಶ ಪಡೆದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ಇಲ್ಲದೆ ಈ ಅಭ್ಯರ್ಥಿಗಳು ವೇತನ/ರಜೆಯ ವೇತನ ಪಡೆಯಲು ಅವಕಾಶವಿರುವುದಿಲ್ಲ.
5. ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿರುವ ಸೇವಾನಿರತ ವೈದ್ಯರುಗಳ ವೇತನ ಹಾಗೂ ನಿಯೋಜನೆ ಭತ್ಯೆ ಬಟವಾಡೆ ಮಾಡುವ ಅಧಿಕಾರವನ್ನು ಅವರನ್ನು ನಿಯೋಜಿಸಿರುವ ಕಾಲೇಜಿಗೆ ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಶಸ್ತ್ರ ಚಿಕಿತ್ಸಕರು: ಸರ್ಕಾರಿ ಕಾಲೇಜಿನ ಪ್ರಾಂಶುಪಾಲರು: ಪ್ರಾಂಶುಪಾಲರು, ಆಕುಕ ತರಬೇತಿ ಕೇಂದ್ರ: ನಿರ್ದೇಶಕರು, ವೈದ್ಯಕೀಯ ಶಿಕ್ಷಣ ನೀಡಲಾಗಿದೆ.
6. ಸದರಿ ಆಯ್ಕೆಗೊಂಡ ಸೇವಾನಿರತ ವೈದ್ಯರು ಸ್ನಾತಕೋತ್ತರ ಕೋರ್ಸು ಪ್ರಾರಂಭವಾಗುವವರೆಗೆ ಯಾವ ಸ್ಥಳದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆಯೋ ಆ ಜಾಗದಲ್ಲಿ ಮುಂದುವರಿಯುವುದು ಹಾಗೂ ತದನಂತರ ಕರ್ತವ್ಯದಿಂದ ಬಿಡುಗಡೆಗೊಳ್ಳತಕ್ಕದ್ದು, ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಅದರಂತೆ ಕ್ರಮ ತೆಗೆದುಕೊಳ್ಳಬೇಕೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್.ಜಗದೀಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆಃ ಆಕುಕ 399 ಹೆಚ್‌ಎಸ್‌ಹೆಚ್ 2005, ದಿನಾಂಕ: 14.06.2005ಕ್ಕೆ**

**ಅನುಬಂಧ**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ವೈದ್ಯಾಧಿಕಾರಿಗಳನ್ನು 2005–06ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗದ ಆಯ್ಕೆಗೆ ನಡೆದ ಸ್ಥಳ ಸಂದರ್ಶನದಲ್ಲಿ ಆಯ್ಕೆಯಾಗಿರುವ ಸೇವಾನಿರತ ವೈದ್ಯಾಧಿಕಾರಿಗಳ ವಿವರ:

| ಕ್ರಮ ಸಂಖ್ಯೆ | ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ | ಸೇವಾನಿರತ ವೈದ್ಯರ ಹೆಸರು ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ | ವೈದ್ಯರುಗಳು ಆಯ್ಕೆಯಾಗಿರುವ | | |
|---|---|---|---|---|---|
| | | | ವಿಷಯ | ವೈದ್ಯಕೀಯ ಮಹಾವಿದ್ಯಾಲಯ | ಆಯ್ಕೆ ಮಾಡಿರುವ ವರ್ಗ |
| 1 | 2 | 3 | 4 | 5 | 6 |
| 01 | 25 | ಡಾ: ವಿಜಯಲಕ್ಷ್ಮಿ. ಬಿ.ಸಿ ಸೇಠ್ ತುಳಸೀದಾಸ್ ಮೋಹನ್‌ದಾಸ್ ಆಸ್ಪತ್ರೆ, ಮೈಸೂರು. | ಎಂಡಿ (ಅನಸ್ತೇ) | ಎಂಎಂಸಿ ಮೈಸೂರು | ಜಿಎಂ |
| 02 | 30 | ಡಾ: ಪದ್ಮಜಾ. ಎ. ಪ್ರಾ.ಆ.ಕೇಂದ್ರ, ಊರ್ಡಿಗೆರೆ, ತುಮಕೂರು ಜಿಲ್ಲೆ. | ಎಂಡಿ (ಅನಸ್ತೇ) | ಕೆಂಪೇಗೌಡ ವೈ.ಮ.ವಿ, ಬೆಂಗಳೂರು | ಜಿಎಂ |
| 03 | 44 | ಡಾ: ಬಾಲಚಂದ್ರ ಗಿರಿಯಾ ಮೇಸ್ತಾ. ಪ್ರಾ.ಆ.ಕೇಂದ್ರ, ಬನವಾಸಿ, ಶಿರಸಿ ತಾಲ್ಲೂಕು, ಉ.ಕ.ಜಿಲ್ಲೆ. | ಎಂಎಸ್ (ಒಬಿಜಿ) | ಸಿದ್ಧಾರ್ಥ ವೈದ್ಯಕೀಯ ಕಾಲೇಜು, ತುಮಕೂರು | ಜಿಎಂ |
| 04 | 59 | ಡಾ: ಲೋಕೇಶ್ವರಿ.ಕೆ.ಎಲ್ ಪ್ರಾ.ಆ.ಕೇಂದ್ರ, ಗರ್ಗೇಶ್ವರಿ, ಮೈಸೂರು ಜಿಲ್ಲೆ. | ಎಂಡಿ (ಅನಸ್ತೇ) | ಜೆಎಸ್‌ಎಸ್, ಮೈಸೂರು | ಜಿಎಂ |
| 05 | 80 | ಡಾ: ಬಸವಯ್ಯ. ಪ್ರಾ.ಆ.ಕೇಂದ್ರ,, ಎನ್ ಬೆಳತ್ತೂರು, ಹೆಚ್.ಡಿ.ಕೋಟೆ ತಾ: ಮೈಸೂರು ಜಿಲ್ಲೆ. | ಎಂಡಿ (ಅನಸ್ತೇ) | ಕಿಮ್ಸ್, ಹುಬ್ಬಳ್ಳಿ | ಎಸ್‌ಸಿ |
| 06 | 75 | ಡಾ: ನಾಗರಾಜ. ಹೆಚ್.ಜಿ ಸ.ಆ.ಕೇಂದ್ರ, ಪಾಲಿಬೆಟ್ಟ, ಕೊಡಗು ಜಿಲ್ಲೆ. | ಎಂಡಿ (ಅನಸ್ತೇ) | ವಿಮ್ಸ್ ಬಳ್ಳಾರಿ | ಜಿಎಂ |
| 07 | 13 | ಡಾ: ಶ್ರೀಧರ. ಸಿ.ಜಿ. ಪ್ರಾ.ಆ.ಕೇಂದ್ರ, ಹಂದನಕೆರೆ, ತುಮಕೂರು ಜಿಲ್ಲೆ. | ಎಂಡಿ (ಜಿಎಂ) | ಬಿಎಂಸಿ, ಬೆಂಗಳೂರು. | ಜಿಎಂ |
| 08 | 19 | ಡಾ: ಶಿವಪ್ಪ.ಡಿ.ಆರ್ ಪ್ರಾ.ಆ.ಕೇಂದ್ರ, ಸೂಲಿಬೆಲೆ ಹೊಸಕೋಟೆ ತಾ: ಬೆಂಗಳೂರು (ಗ್ರಾ) ಜಿಲ್ಲೆ. | ಎಂಡಿ (ಜಿಎಂ) | ಡಿಯುಎಂಸಿ, ಕೋಲಾರ. | ಜಿಎಂ |
| 09 | 20 | ಡಾ: ಗಿರೀಶ್. ಎಸ್. ಪ್ರಾ.ಆ.ಘಟಕ, ಕುಂದೂರು ಮೂಡಿಗೆರೆ ತಾ: ಚಿಕ್ಕಮಗಳೂರು ಜಿಲ್ಲೆ. | ಎಂಡಿ (ಜಿಎಂ) | ಕೆಎಂಸಿ, ಮಂಗಳೂರು | ಜಿಎಂ |
| 10 | 33 | ಡಾ: ರಾಜೀವ್. ಎಲ್.ಕೆ. ಪ್ರಾ.ಆ.ಕೇಂದ್ರ, ಹುಣಸೆಘಟ್ಟ, ತರೀಕೆರೆ ತಾ: ಚಿಕ್ಕಮಗಳೂರು ಜಿಲ್ಲೆ. | ಎಂಡಿ (ಜಿಎಂ) | ಜೆಜೆಎಂಸಿ, ದಾವಣಗೆರೆ | ಜಿಎಂ |
| 11 | 35 | ಡಾ: ಅಬ್ದುಲ್ ಅಜೀಜ್. ಎ.ಎಂ. ಪ್ರಾ.ಆ.ಕೇಂದ್ರ, ವಿಟ್ಲ, ಬಂಟ್ವಾಳ ತಾ: ದ.ಕ.ಜಿಲ್ಲೆ | ಎಂಡಿ (ಜಿಎಂ) | ಜೆಎಸ್‌ಎಸ್, ಮೈಸೂರು | ಜಿಎಂ |
| 12 | 36 | ಡಾ: ಅನಿಲ್. ಎಸ್. ಪ್ರಾ.ಆಘಟಕ, ದೊಡ್ಡನೆಕ್ಕುಂದಿ, ಬೆಂಗಳೂರು ನಗರ ಜಿಲ್ಲೆ. | ಎಂಡಿ (ಜಿಎಂ) | ಎಂಎಂಸಿ ಮೈಸೂರು | ಜಿಎಂ |
| 13 | 49 | ಡಾ: ಜಗದೀಶ್ ಚಂದ್ರ.ಎಸ್ ಬೆನ್ನೂರ್. ಪ್ರಾ.ಆ.ಕೇಂದ್ರ, ಕಡಗಂಚಿ, ಆಳಂದ ತಾ: ಗುಲ್ಬರ್ಗಾ | ಎಂಡಿ(ಜಿಎಂ) | ಆಲ್ ಅಮೀನ್ ಮೆಡಿಕಲ್ ಕಾಲೇಜ್, ಬಿಜಾಪುರ. | ಜಿಎಂ |

| 1 | 2 | 3 | 4 | 5 | 6 |
|---|---|---|---|---|---|
| 14 | 53 | ಡಾ: ಶ್ರೀನಿವಾಸ ನಾಯಕ್ ಪ್ರಾ.ಆ.ಘಟಕ, ಹನಕೌನ್, ಕಾರವಾರ ಜಿಲ್ಲೆ. | ಎಂಡಿ (ಜಿಎಂ) | ಬಿಎಲ್‌ಡಿಇಎ ಬಿಜಾಪುರ. | ಜಿಎಂ |
| 15 | 78 | ಡಾ: ಪ್ರಕಾಶ್. ಡಿ. ಪ್ರಾ.ಆ.ಕೇಂದ್ರ, ಉಚ್ಚಂಗಿ ದುರ್ಗ, ದಾವಣಗೆರೆ ಜಿಲ್ಲೆ. | ಎಂಡಿ (ಜಿಎಂ) | ಜೆಜೆಎಂಸಿ, ದಾವಣಗೆರೆ. | ಎಸ್‌ಸಿ |
| 16 | 79 | ಡಾ: ವಿಜಯಕುಮಾರ.ಎಂ ಟಿ.ಬಿ.ಆಸ್ಪತ್ರೆ, ಮೂಡಶೆಡ್, ಮಂಗಳೂರು ಜಿಲ್ಲೆ. | ಎಂಡಿ (ಜಿಎಂ) | ಎಂಎಂಸಿ ಮೈಸೂರು, | ಎಸ್‌ಟಿ |
| 17 | 82 | ಡಾ: ರಾಜು. ಆರ್. ಪ್ರಾ.ಆ.ಕೇಂದ್ರ, ಹಿರೇಕೊಗಲೂರು, ದಾವಣಗೆರೆ ಜಿಲ್ಲೆ. | ಎಂಡಿ (ಜಿಎಂ) | ಎಂಎಂಸಿ ಬೆಂಗಳೂರು. | ಎಸ್‌ಸಿ |
| 18 | 103 | ಡಾ: ದಿವಾಕರ. ಕೆ.ಹೆಚ್. ಪ್ರಾ.ಆ.ಕೇಂದ್ರ, ಬೆಳಗೊಳ ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ. | ಎಂಡಿ (ಜಿಎಂ) | ಸೇಂಟ್ ಜಾನ್ಸ್ ಮೆಡಿಕಲ್ ಕಾಲೇಜ್, ಬೆಂಗಳೂರು. | ಜಿಎಂ |
| 19 | 86 | ಡಾ: ಸುನಿತಾ. ವಿ. ಆರೋಗ್ಯ ಕೇಂದ್ರ, ಬಾಪೂಜಿನಗರ, ಅಂಗಳ್ಳೆಯನ ಕೆರೆ, ಶಿವಮೊಗ್ಗ ಜಿಲ್ಲೆ. | ಡಿಸಿಹೆಚ್ | ಜೆಜೆಎಂಸಿ, ದಾವಣಗೆರೆ. | ಜಿಎಂ |
| 20 | 112 | ಡಾ: ಜ್ಞಾನೇಶ್ವರ. ಕೆ.ಬಿ. ಸಿಜಿ ಆಸ್ಪತ್ರೆ, ದಾವಣಗೆರೆ. | ಎಂಡಿ (ಮೈಕ್ರೋ) | ಜೆಜೆಎಂಸಿ ದಾವಣಗೆರೆ | ಜಿಎಂ |
| 21 | 5 | ಡಾ: ಅಶೋಕ.ಹೆಚ್.ಎನ್ ಪ್ರಾ.ಆ.ಕೇಂದ್ರ, ಶಿರವಾಸೆ, ಚಿಕ್ಕಮಗಳೂರು ಜಿಲ್ಲೆ. | ಎಂಡಿ (ಪೀಡಿಯಾ) | ಬಿಎಂಸಿ, ಬೆಂಗಳೂರು | ಜಿಎಂ |
| 22 | 7 | ಡಾ: ಹರೀಶ್ ಬಾಬು.ಜಿ.ಎ ಪ್ರಾ.ಆ.ಕೇಂದ್ರ, ಗೌನಿಪಲ್ಲಿ, ಶ್ರೀನಿವಾಸಪುರ ತಾ: ಕೋಲಾರ ಜಿಲ್ಲೆ. | ಎಂಡಿ (ಪೀಡಿಯಾ) | ಎಂಎಸ್ ರಾಮಯ್ಯ, ಬೆಂಗಳೂರು. | ಜಿಎಂ |
| 23 | 11 | ಡಾ: ಚಿಕ್ಕನರಸಾ ರೆಡ್ಡಿ.ಪಿ.ಎಸ್. ಸಾರ್ವಜನಿಕ ಆಸ್ಪತ್ರೆ, ಪಾವಗಡ, ತುಮಕೂರುಜಿಲ್ಲೆ | ಎಂಡಿ (ಪೀಡಿಯಾ) | ಜೆಜೆಎಂಸಿ, ದಾವಣಗೆರೆ. | ಜಿಎಂ |
| 24 | 22 | ಡಾ: ಚಂಪಕ ಮಾಲಿನಿ.ಎಸ್ ಮಾವಿನತೊಪ್. ಸಾ. ಆಸ್ಪತ್ರೆ, ಹಿರೇಕೆರೂರು, ಹಾವೇರಿ ಜಿಲ್ಲೆ. | ಎಂಡಿ (ಪೀಡಿಯಾ) | ವಿಮ್ಸ್, ಬಳ್ಳಾರಿ. | ಜಿಎಂ |
| 25 | 58 | ಡಾ: ನಿಂಗಪ್ಪ ಬನ್ನಿಗಿಡದ್ ಸಾರ್ವಜನಿಕ ಆಸ್ಪತ್ರೆ, ರಾಮದುರ್ಗ, ಬೆಳಗಾಂ ಜಿಲ್ಲೆ. | ಎಂಡಿ (ಪೀಡಿಯಾ) | ಇಂದಿರಾ ಗಾಂಧಿ ಇನ್‌ಸ್ಟಿಟ್ಯೂಟ್ ಆಫ್ ಚೈಲ್ಡ್ ಹೆಲ್ತ್, ಬೆಂಗಳೂರು. | ಎಸ್‌ಸಿ |
| 26 | 32 | ಡಾ: ಶಿವಶಂಕರ್. ಪಿ. ರಕ್ತ ನಿಧಿ ಕೇಂದ್ರ, ಜಿಲ್ಲಾ ಆಸ್ಪತ್ರೆ, ಚಾಮರಾಜನಗರ. | ಎಂಡಿ (ಪೀಡಿಯಾ) | ಜೆಎಸ್‌ಎಸ್, ಮೈಸೂರು | ಜಿಎಂ |
| 27 | 71 | ಡಾ: ಗಾಯಿತ್ರಿ. ಆರ್.ಕೆ. ಪ್ರಾ.ಆ.ಘಟಕ, ಕಗ್ಗತ್ತೂರು ಚನ್ನಗಿರಿ ತಾ: ದಾವಣಗೆರೆ ಜಿಲ್ಲೆ. | ಎಂಡಿ (ಪೆಥಾಲಜಿ) | ಕಿಮ್ಸ್, ಹುಬ್ಬಳ್ಳಿ. | ಜಿಎಂ |
| 28 | 109 | ಡಾ: ಶಿವಕುಮಾರ ಸ್ವಾಮಿ ಉದಾಸಿಮಠ್. ಪ್ರಾಆಕೇಂದ್ರ, ಚಿಕ್ಕಬಾಸೂರು, ಬ್ಯಾಡಗಿ ತಾ: ಹಾವೇರಿಜಿಲ್ಲೆ | ಎಂಡಿ (ಪೆಥಾಲಜಿ) | ಬಿಎಲ್‌ಡಿಇಎ ಬಿಜಾಪುರ. | ಜಿಎಂ |
| 29 | 119 | ಡಾ: ಶೀಲಾ.ಎಂ.ಎಸ್. ಪ್ರಾಆಘಟಕ,ಚಿಕ್ಕಬ್ಯಾಡರಹಳ್ಳಿ ಪಾಂಡವಪುರ ತಾ: ಮಂಡ್ಯ ಜಿಲ್ಲೆ. | ಎಂಡಿ (ಪೆಥಾಲಜಿ) | ಜೆಜೆಎಂಸಿ, ದಾವಣಗೆರೆ | ಎಸ್‌ಸಿ |

| 1 | 2 | 3 | 4 | 5 | 6 |
|---|---|---|---|---|---|
| 30 | 3 | ಡಾ: ಮೈತ್ರೀಶಾ. ಪ್ರಾ.ಆ.ಕೇಂದ್ರ, ಕೊಯಿರಾ ದೇವನಹಳ್ಳಿ ತಾ: ಬೆಂಗಳೂರು (ಗ್ರಾ) ಜಿಲ್ಲೆ. | ಎಂಡಿ (ಆರ್‌ಡಿ) | ಬಿಎಂಸಿ, ಬೆಂಗಳೂರು. | ಜಿಎಂ |
| 31 | 6 | ಡಾ: ಈರಣ್ಣ ರುದ್ರಪ್ಪ ಪಲ್ಲೇದ್ ನಗರ ಕುಟುಂಬ ಕಲ್ಯಾಣ ಕೇಂದ್ರ, ಗುಲ್ಬರ್ಗಾ ಜಿಲ್ಲೆ. | ಎಂಡಿ (ಆರ್‌ಡಿ) | ಜೆಎನ್‌ಎಂಸಿ, ಬೆಳಗಾಂ. | ಜಿಎಂ |
| 32 | 9 | ಡಾ: ಸವಿತಾ. ಡಿ. ಎನ್‌ಎಲ್‌ಸಿಡಿ, ಆಕುಕ ತರಬೇತಿ ಕೇಂದ್ರ, ಹುಬ್ಬಳ್ಳಿ. | ಎಂಡಿ (ಸ್ಕಿನ್) | ವಿಮ್ಸ್, ಬಳ್ಳಾರಿ. | ಜಿಎಂ |
| 33 | 57 | ಡಾ: ಬಂಗಾರು. ಹೆಚ್. ಜಿಲ್ಲಾ ಕ್ಷಯಾ ರೋಗ ನಿಯಂತ್ರಣ ಅಧಿಕಾರಿ, ಚಾಮರಾಜನಗರ. | ಎಂಡಿ (ಸ್ಕಿನ್) | ಜೆಜೆಎಂಸಿ, ದಾವಣಗೆರೆ. | ಜಿಎಂ |
| 34 | 76 | ಡಾ: ಸುರೇಂದ್ರನ್. ಕೆ.ಎ.ಕೆ. ಪ್ರಾ.ಆ.ಕೇಂದ್ರ, ಪಡಗೂರು, ಗುಂಡ್ಲುಪೇಟೆ ತಾ: ಚಾಮರಾಜನಗರ ಜಿಲ್ಲೆ. | ಎಂಡಿ (ಸ್ಕಿನ್) | ಫಾದರ್ ಮುಲ್ಲರ್ ಮೆಡಿಕಲ್ ಕಾಲೇಜ್, ಮಂಗಳೂರು. | ಜಿಎಂ |
| 35 | 60 | ಡಾ: ಶಿವಕುಮಾರ್.ಕೆ.ಬಿ ಪ್ರಾ.ಆ.ಕೇಂದ್ರ, ಕೆರಗೋಡ್ ಮಂಡ್ಯ ಜಿಲ್ಲೆ. | ಎಂಎಸ್ (ಇಎನ್‌ಟಿ) | ಬಿಎಂಸಿ, ಬೆಂಗಳೂರು. | ಜಿಎಂ |
| 36 | 93 | ಡಾ: ಚಂದನ್. ಜಿ.ಬಿ. ಪ್ರಾ.ಆ.ಕೇಂದ್ರ, ಕೆಸ್ತೂರು, ತುಮಕೂರು ಜಿಲ್ಲೆ. | ಎಂಎಸ್ (ಆರ್ಥೋ) | ಬಿಎಲ್‌ಡಿಇಎ ಬಿಜಾಪುರ | ಜಿಎಂ |
| 37 | 12 | ಡಾ: ಗಜಾನನ ಶ್ರೀಪಾದ ಭಟ್. ಪ್ರಾ.ಆ.ಕೇಂದ್ರ, ಬಳಕೂರು ಹೊನ್ನಾವರ ತಾ: ಉ.ಕ.ಜಿಲ್ಲೆ. | ಎಂಎಸ್ (ಜಿಎಸ್) | ಕಿಮ್ಸ್, ಹುಬ್ಬಳ್ಳಿ. | ಜಿಎಂ |
| 38 | 27 | ಡಾ: ರವೀಂದ್ರ ಕುಮಾರ್. ಟಿ.ಎಂ. ಪ್ರಾ.ಆ.ಕೇಂದ್ರ, ಕನ್ನಹೊಸಹಳ್ಳಿ, ಕೂಡ್ಲಗಿ ತಾ: ಬಳ್ಳಾರಿ ಜಿಲ್ಲೆ. | ಎಂಎಸ್ (ಜಿಎಸ್) | ಜೆಜೆಎಂಸಿ, ದಾವಣಗೆರೆ. | ಜಿಎಂ |
| 39 | 29 | ಡಾ: ಜುಬೇರ್ ಅಹ್ಮದ್. ಕೆ. ಪ್ರಾ.ಆ.ಕೇಂದ್ರ, ದೇವಸಮುದ್ರ, ಹೊಸಪೇಟೆ ತಾ: ಬಳ್ಳಾರಿ ಜಿಲ್ಲೆ. | ಎಂಎಸ್ (ಜಿಎಸ್) | ಎಂಎಂಸಿ, ಮೈಸೂರು. | ಜಿಎಂ |
| 40 | 37 | ಡಾ: ಶಿವಪ್ರಕಾಶ್.ಡಿ.ಎಸ್. ಪ್ರಾ.ಆ.ಕೇಂದ್ರ, ಕಪ್ಪನಹಳ್ಳಿ, ಶಿಕಾರಿಪುರ ತಾ: ಶಿವಮೊಗ್ಗ ಜಿಲ್ಲೆ. | ಎಂಎಸ್ (ಜಿಎಸ್) | ಎಂಎಂಸಿ ಮೈಸೂರು. | ಜಿಎಂ |
| 41 | 38 | ಡಾ: ಅನಿಲ್ ಕುಮಾರ್ ಎಂ ತಲ್‌ವಾಡೆ. ಸಾರ್ವಜನಿಕ ಆಸ್ಪತ್ರೆ, ಭಾಲ್ಕಿ. ಬೀದರ್ ಜಿಲ್ಲೆ. | ಎಂಎಸ್ (ಜಿಎಸ್) | ಬಿಎಂಸಿ, ಬೆಂಗಳೂರು | ಜಿಎಂ |
| 42 | 41 | ಡಾ: ಅಮರಪ್ಪ ಪರಮಣ್ಣ ಪ್ರಾ.ಆ.ಕೇಂದ್ರ, ಮಣ್ಣೂರು, ಅಫ಼ಜಲ್‌ಪುರ ತಾ: ಗುಲ್ಬರ್ಗಾ ಜಿಲ್ಲೆ. | ಎಂಎಸ್ (ಜಿಎಸ್) | ಬಿಎಂಸಿ ಬೆಂಗಳೂರು. | ಜಿಎಂ |
| 43 | 69 | ಡಾ: ಮುರಳೀಧರ.ಬಿ.ಆರ್ ಪ್ರಾ.ಆ.ಘಟಕ, ಶ್ರೀನಿವಾಸಪುರಚನ್ನರಾಯಪಟ್ಟಣ, ಹಾಸನ ಜಿಲ್ಲೆ. | ಎಂಎಸ್ (ಜಿಎಸ್) | ಜೆಎನ್‌ಎಂಸಿ, ಬೆಳಗಾಂ. | ಜಿಎಂ |
| 44 | 72 | ಡಾ: ಮಹೇಶ್ ಬಾಳಪ್ಪ ಕೋಣಿ. ಪ್ರಾ.ಆ.ಕೇಂದ್ರ, ಬೆಟಗೇರಿ, ಗೋಕಾಕ್ ತಾ: ಬೆಳಗಾಂ ಜಿಲ್ಲೆ | ಎಂಡಿ(ಜಿಎಂ) | ಜೆಎನ್‌ಎಂಸಿ ಬೆಳಗಾಂ | ಜಿಎಂ |
| 45 | 77 | ಡಾ: ರಾಜಕುಮಾರ್ ನಾಯಕ್. ಜಿ. ಪ್ರಾ.ಆ.ಘಟಕ, ಬನುವಳ್ಳಿ, ಹರಿಹರ ತಾ: ದಾವಣಗೆರೆ | ಎಂಎಸ್ (ಜಿಎಸ್) | ವಿಮ್ಸ್, ಬಳ್ಳಾರಿ. | ಎಸ್‌ಸಿ |
| 46 | 81 | ಡಾ: ವಿಶ್ವನಾಥ್ ಜಾಜು ರೇವಣಕರ್ | ಎಂಎಸ್ (ಜಿಎಸ್) | ಬಿಎಲ್‌ಡಿಇಎ, ಬಿಜಾಪುರ. | ಎಸ್‌ಸಿ |

| 1 | 2 | 3 | 4 | 5 | 6 |
|---|---|---|---|---|---|
| 47 | 95 | ಡಾ: ವಾಸಿಂ ಇಮ್ರಾನ್ ಪ್ರಾ.ಆ.ಕೇಂದ್ರ, ಹೊಳವನಹಳ್ಳಿ, ತುಮಕೂರು ಜಿಲ್ಲೆ. | ಎಂಎಸ್ (ಜಿಎಸ್) | ಸೇಂಟ್ ಜಾನ್ಸ್ ಮೆಡಿಕಲ್ ಕಾಲೇಜ್, ಬೆಂಗಳೂರು | ಜಿಎಂ |
| 48 | 115 | ಡಾ: ಮುರಳೀಧರ್. ಆರ್ ದೊಡ್ಡಮನಿ. ಸ.ಆ.ಕೇಂದ್ರ, ಸಂತೇಬೆನ್ನೂರು, ಚನ್ನಗಿರಿ ತಾ: ದಾವಣಗೆರೆ ಜಿಲ್ಲೆ. | ಎಂಎಸ್ (ಜಿಎಸ್) | ಕಿಮ್ಸ್ ಹುಬ್ಬಳ್ಳಿ | ಎಸ್‌ಟಿ |
| 49 | 8 | ಡಾ: ಸುನಿತಾ. ಕೆ.ಎಸ್. ಇಂಡಿಯನ್ ಪಾಪುಲೇಷನ್ ಕಾಲೇಜ್ 8ನೇ, ಶಾಂತಿನಗರ, ಎಂಸಿಸಿ, ಮೈಸೂರು ಜಿಲ್ಲೆ. | ಎಂಎಸ್ (ಓಬಿಜಿ) | ಬಿಎಂಸಿ, ಬೆಂಗಳೂರು. | ಜಿಎಂ |
| 50 | 10 | ಡಾ: ಮಂಜುಳಾ. ಈ. ಪ್ರಾಆಕೇಂದ್ರ, ಐರಗಂಪನಹಳ್ಳಿಚಿಂತಾಮಣಿ ತಾ: ಕೋಲಾರ ಜಿಲ್ಲೆ. | ಎಂಎಸ್ (ಓಬಿಜಿ) | ಎಂಎಸ್ ರಾಮಯ್ಯ, ಬೆಂಗಳೂರು. | ಜಿಎಂ |
| 51 | 16 | ಡಾ: ಪೈರು ಜಗನ್ನಾಥ್. ಸಾರ್ವಜನಿಕ ಆಸ್ಪತ್ರೆ, ಶಿಡ್ಲಘಟ್ಟ, ಕೋಲಾರ ಜಿಲ್ಲೆ. | ಎಂಎಸ್ (ಓಬಿಜಿ) | ಕೆಂಪೇಗೌಡ ವೈ.ಮ.ವಿ ಬೆಂಗಳೂರು | ಜಿಎಂ |
| 52 | 21 | ಡಾ: ವೀಣಾ. ಎಂ.ಎಸ್. ಪ್ರಾ.ಆ.ಘಟಕ, ರಾಮಪುರ ಎಲೆಕ್ಟ್ರಿಕ್ ಕಾಲೋನಿ, ಚನ್ನರಾಯಪಟ್ಟಣ ತಾ: ಹಾಸನ ಜಿಲ್ಲೆ. | ಎಂಎಸ್ (ಓಬಿಜಿ) | ಕಿಮ್ಸ್, ಹುಬ್ಬಳ್ಳಿ. | ಜಿಎಂ |
| 53 | 23 | ಡಾ: ರವಿಕುಮಾರ್. ಬಿ.ಎನ್ ಪ್ರಾ.ಆ.ಘಟಕ, ಆದಿವಾಲ, ಹಿರಿಯೂರು ತಾ: ಚಿತ್ರದುರ್ಗ ಜಿಲ್ಲೆ. | ಎಂಎಸ್ (ಓಬಿಜಿ) | ವಿಮ್ಸ್, ಬಳ್ಳಾರಿ. | ಜಿಎಂ |
| 54 | 26 | ಡಾ: ಶಾಲಿನಿ. ಡಿ. ಮೆನೆನ್‌ಜಸ್. ಸ.ಆ.ಕೇಂದ್ರ, ಶಿರ್ವಾ, ಉಡುಪಿ ಜಿಲ್ಲೆ. | ಎಂಎಸ್ (ಓಬಿಜಿ) | ಜೆಜೆಎಂಸಿ, ದಾವಣಗೆರೆ. | ಜಿಎಂ |
| 55 | 61 | ಡಾ: ಮಂಜುಳಾ. ಕೆ. ಸ.ಆ.ಕೇಂದ್ರ, ಬೆಳ್ತಂಗಡಿ, ದ.ಕ.ಜಿಲ್ಲೆ. | ಎಂಎಸ್ (ಓಬಿಜಿ) | ಜೆಎನ್‌ಎಂಸಿ, ಬೆಳಗಾಂ. | ಎಸ್‌ಸಿ |
| 56 | 31 | ಡಾ: ಸುರೇಶ. ಎ.ಆರ್. ಚಿಗಟೇರಿ ಆಸ್ಪತ್ರೆ, ದಾವಣಗೆರೆ. | ಎಂಎಸ್ (ನೇತ್ರ) | ಎಂಎಂಸಿ, ಮೈಸೂರು. | ಜಿಎಂ |
| 57 | 56 | ಡಾ: ವಿಜಯನರಸಿಂಹ. ಎನ್.ಎಲ್. ಸ.ಆ.ಕೇಂದ್ರ, ವಿಜಯಪುರ ದೇವನಹಳ್ಳಿ ತಾ: ಬೆಂಗಳೂರು (ಗ್ರಾ) ಜಿಲ್ಲೆ. | ಎಂಎಸ್ (ನೇತ್ರ) | ಡಿಯುಎಂಸಿ, ಕೋಲಾರ. | ಜಿಎಂ |
| 58 | 70 | ಡಾ: ಜಗದೀಶ್ ಎಸ್ . ಗಾಣಗಿ. ಪ್ರಾ.ಆ.ಕೇಂದ್ರ, ಹಲಗಲಿ ಮುಧೋಳ ತಾ: ಬಾಗಲಕೋಟೆ ಜಿಲ್ಲೆ. | ಎಂಎಸ್ (ಜಿಎಸ್) | ಎಂಎಸ್ ರಾಮಯ್ಯ ವೈದ್ಯಕೀಯ ಕಾಲೇಜು, ಬೆಂಗಳೂರು | ಜಿಎಂ |
| 59 | 1 | ಡಾ: ಮುತ್ತಪ್ಪ. ಕೆ.ಬಿ. ಜಿಲ್ಲಾ ಆಸ್ಪತ್ರೆ, ಮಡಿಕೇರಿ. | ಎಂಎಸ್ (ಆರ್ಥೋ) | ಜೆಎಸ್‌ಎಸ್, ಮೈಸೂರು. | ಜಿಎಂ |
| 60 | 24 | ಡಾ: ವೀರೇಶ್ ವೈ ನರೆಗಲ್ ಸಾರ್ವಜನಿಕ ಆಸ್ಪತ್ರೆ, ಶಿರಗುಪ್ಪ, ಬಳ್ಳಾರಿ ಜಿಲ್ಲೆ. | ಎಂಎಸ್ (ಆರ್ಥೋ) | ಜೆಜೆಎಂಸಿ, ದಾವಣಗೆರೆ. | ಜಿಎಂ |
| 61 | 55 | ಡಾ: ವೆಂಕಟೇಶ್. ಬಿ.ಸಿ. ಪ್ರಾ.ಆ.ಕೇಂದ್ರ, ಕರೆಹಳ್ಳಿ, ದೇವನಹಳ್ಳಿ ತಾ: ಬೆಂಗಳೂರು (ಗ್ರಾ) ಜಿಲ್ಲೆ. | ಎಂಎಸ್ (ಆರ್ಥೋ) | ಬಿಎಂಸಿ, ಬೆಂಗಳೂರು. | ಎಸ್‌ಸಿ |
| 62 | 74 | ಡಾ: ಶಿಂಧೆ ವಿಠಲ್ ವೆಂಕಟಪ್ಪ. ಪ್ರಾ.ಆ.ಕೇಂದ್ರ, ಅಂಕಲಿ, ಚಿಕ್ಕೋಡಿ ತಾ: ಬೆಳಗಾಂ ಜಿಲ್ಲೆ. | ಎಂಎಸ್ (ಜಿಎಸ್) | ಫಾದರ್‌ಮುಲ್ಲಾ ಮೆಡಿಕಲ್ ಕಾಲೇಜು, ಮಂಗಳೂರು. | ಜಿಎಂ |

| 1 | 2 | 3 | 4 | 5 | 6 |
|---|---|---|---|---|---|
| 63 | 89 | ಡಾ: ರಾಜಲಕ್ಷ್ಮಿ ಎಸ್.ವಿ ಸಾರ್ವಜನಿಕ ಆಸ್ಪತ್ರೆ, ಚಿಕ್ಕಬಳ್ಳಾಪುರ ತಾ: ಕೋಲಾರ ಜಿಲ್ಲೆ. | ಎಂಡಿ (ಅರವಳಿಕೆ) | ಜೆಜೆಎಂಸಿ ದಾವಣಗೆರೆ | ಜಿಎಂ |
| 64 | 97 | ಡಾ: ಸುಧಾಕರ್. ಆರ್.ಸಿ ಪ್ರಾ.ಆ.ಘಟಕ, ನಗರಗೆರೆ ಗೌರಿಬಿದನೂರು ತಾ: ಕೋಲಾರ ಜಿಲ್ಲೆ. | ಡಿಎಂಆರ್‌ಡಿ | ಜೆಜೆಎಂಸಿ ದಾವಣಗೆರೆ | ಜಿಎಂ |
| 65 | 113 | ಡಾ: ನಿರ್ಮಲಾ. ಎಸ್. ಪ್ರಾ.ಆ.ಕೇಂದ್ರ, ಇಂಚಲ್ ಸವದತ್ತಿ ತಾ; ಬೆಳಗಾಂ ಜಿಲ್ಲೆ. | ಡಿಎ (ಅರವಳಿಕೆ) | ಜೆಜೆಎಂಸಿ, ದಾವಣಗೆರೆ. | ಜಿಎಂ |
| 66 | 120 | ಡಾ: ಪುಷ್ಪಲತಾ ಎಸ್ ಸುಣ್ಣದಕಲ್. ಪ್ರಾ.ಆ.ಕೇಂದ್ರ, ಕಾಗವಾಡ ಅಥಣಿ ತಾ: ಬೆಳಗಾಂ ಜಿಲ್ಲೆ. | ಡಿಎ (ಅರವಳಿಕೆ) | ಬಿಎಂಸಿ ಬೆಂಗಳೂರು | ಎಸ್‌ಟಿ |
| 67 | 96 | ಡಾ: ವಿನುತಾ. ಕೆ. ಬೆಂಗಳೂರು ನಗರ ಜಿಲ್ಲೆ. | ಡಿಎಂಆರ್‌ಡಿ | ಬಿಎಂಸಿ, ಬೆಂಗಳೂರು. | ಜಿಎಂ |
| 68 | 14 | ಡಾ: ಆನಂದ್. ಜಿ. ಪ್ರಾ.ಆ.ಕೇಂದ್ರ, ಹಿರೇಗುತ್ತಿ, ಕುಮಟಾ ತಾ: ಉ.ಕ. ಜಿಲ್ಲೆ. | ಡಿಸಿಹೆಚ್ | ಎಂಎಂಸಿ, ಮೈಸೂರು. | ಜಿಎಂ |
| 69 | 34 | ಡಾ: ತಿಪ್ಪೇಸ್ವಾಮಿ. ಎ. ಜಿಎಡಿ, ಬಂಡಟ್ಟಿ, ಬಳ್ಳಾರಿ ಜಿಲ್ಲೆ. | ಡಿಸಿಹೆಚ್ | ಕೆಂಪೇಗೌಡ ವೈ.ಮ.ವಿ ಬೆಂಗಳೂರು | ಜಿಎಂ |
| 70 | 68 | ಡಾ: ವಾಗೀಶ್. ಎಸ್. ಪ್ರಾ.ಆ.ಕೇಂದ್ರ, ಹೆಸರಘಟ್ಟ, ಬೆಂಗಳೂರು ನಗರ ಜಿಲ್ಲೆ. | ಎಂಡಿ(ಜಿಎಂ) | ಎಐಎಂಸಿ, ಬೆಳ್ಳೂರು, | ಜಿಎಂ |
| 71 | 85 | ಡಾ: ರಮೇಶ್ ಬಾಬು ಕಾರಾಗೃಹ ಆಸ್ಪತ್ರೆ, ರಾಯಚೂರು. | ಎಂಡಿ(ಜಿಎಂ) | ಎಂಎಸ್ ರಾಮಯ್ಯ ವೈದ್ಯಕೀಯ ಕಾಲೇಜು, ಬೆಂಗಳೂರು | ಎಸ್‌ಸಿ |
| 72 | 90 | ಡಾ: ಸುಮ. ಬಿ.ಎಸ್. ಬೆಂಗಳೂರು ಮಹಾನಗರಪಾಲಿಕೆ ಬೆಂಗಳೂರು (ನಿಯೋಜನೆಯಲ್ಲಿರುವ) | ಡಿಸಿಹೆಚ್ | ಎಂಎಂಸಿ ಮೈಸೂರು | ಜಿಎಂ |
| 73 | 28 | ಡಾ: ಆಶಾ ಭಟ್. ಕೆ.ಐ. ಜಿಲ್ಲಾ ಆಸ್ಪತ್ರೆ, ಕಾರವಾರ. | ಡಿಜಿಓ | ಬಿಎಂಸಿ ಬೆಂಗಳೂರು. | ಜಿಎಂ |
| 74 | 45 | ಡಾ: ಕೃಷ್ಣ. ಜಿ. ಪ್ರಾ.ಆ.ಘಟಕ, ಹೊಸದ್, ಹೊನ್ನಾವಾರ ತಾ: ಉ.ಕ.ಜಿಲ್ಲೆ. | ಡಿಜಿಓ | ಕಿಮ್ಸ್, ಹುಬ್ಬಳ್ಳಿ. | ಜಿಎಂ |
| 75 | 48 | ಡಾ: ಚಂದ್ರ ಮರಕಳ ಪ್ರಾ.ಆ.ಕೇಂದ್ರ, ನಡ, ಕುಂದಾಪುರ ತಾ: ಉಡುಪಿ ಜಿಲ್ಲೆ. | ಡಿಜಿಓ | ಎಂಎಂಸಿ ಮೈಸೂರು. | ಜಿಎಂ |
| 76 | 54 | ಡಾ: ರಾಧಾ ದೇವಿ. ಕೆ. ಐಸಿಡಿಎಸ್ , ಬಳ್ಳಾರಿ | ಡಿಜಿಓ | ಡಿಯುಎಂಸಿ, ಕೋಲಾರ. | ಜಿಎಂ |
| 77 | 63 | ಡಾ: ಕಬಾಡೆ ಇಂದಿರಾ. ಪ್ರಾ.ಆ.ಘಟಕ, ವಡಗಾಂವ್, ಬೆಳಗಾಂ ಜಿಲ್ಲೆ. | ಡಿಜಿಓ | ಜೆಎನ್ಎಂಸಿ, ಬೆಳಗಾಂ. | ಜಿಎಂ |
| 78 | 105 | ಡಾ: ರಜನಿ. ಜಿ.ಎಂ. ಸ.ಆ.ಕೇಂದ್ರ, ಚಿಟಗುಪ್ಪ, ಬೀದರ್ ಜಿಲ್ಲೆ. | ಡಿಎಂಆರ್‌ಡಿ | ಎಂಆರ್‌ಎಂಸಿ ಗುಲ್ಬರ್ಗಾ. | ಜಿಎಂ |
| 79 | 116 | ಡಾ: ಗಾಯಿತ್ರಿ ದೇವಿ.ಆರ್ ಪ್ರಾ.ಆ.ಕೇಂದ್ರ, ನ್ಯಾಮತಿ, ದಾವಣಗೆರೆ ಜಿಲ್ಲೆ. | ಡಿಜಿಓ | ಕೆಎಂಸಿ, ಮಂಗಳೂರು. | ಜಿಎಂ |

| 1 | 2 | 3 | 4 | 5 | 6 |
|---|---|---|---|---|---|
| 80 | 50 | ಡಾ: ಮಂಜುಳಾ. ಕೆ.ಎಲ್ ಪ್ರಾ.ಆ.ಘಟಕ, ಗೌಡಗೆರೆ ಚನ್ನರಾಯಪಟ್ಟಣ ತಾ: ಹಾಸನ ಜಿಲ್ಲೆ. | ಎಂಎಸ್ (ಜಿಎಸ್) | ಜೆಎಸ್‌ಎಸ್ ಮೈಸೂರು | ಜಿಎಂ |
| 81 | 64 | ಡಾ: ಪುಷ್ಪಲತಾ. ಕೆ.ಎನ್ ಪ್ರಾ.ಆ.ಘಟಕ, ಸಾದಹಳ್ಳಿ, ದೇವನಹಳ್ಳಿ ತಾ: ಬೆಂಗಳೂರು (ಗ್ರಾ) ಜಿಲ್ಲೆ. | ಡಿಎಂಆರ್‌ಡಿ | ಬಿಎಂಸಿ ಬೆಂಗಳೂರು | ಎಸ್‌ಸಿ |
| 82 | 84 | ಡಾ: ಕುಮಾರ್. ಆರ್. ಪ್ರಾ.ಆ.ಘಟಕ, ಹರಿಶಿ, ಸೊರಬ ತಾ: ಶಿವಮೊಗ್ಗಜಿಲ್ಲೆ | ಎಂಡಿ (ಮೈಕ್ರೋ) | ಎಂಎಂಸಿ ಮೈಸೂರು | ಜಿಎಂ |
| 83 | 87 | ಡಾ: ಅರುಣಾ.ಹೆಚ್.ಎನ್ ಪ್ರಾ.ಆ.ಘಟಕ, ಹೇತಗೌಡನ ಹಳ್ಳಿ, ಹಾಸನ ಜಿಲ್ಲೆ. | ಎಂಎಸ್ (ಜಿಎಸ್) | ಎಐಎಂಎಸ್ ಬೆಳ್ಳೂರು | ಜಿಎಂ |
| 84 | 66 | ಡಾ: ಉಮಾಶಂಕರಿ. ಎ. ಪ್ರಾಆಕೇಂದ್ರ, ಕ್ಯಾಸಂಬಹಳ್ಳಿ, ಬಂಗಾರಪೇಟೆ ತಾ: ಕೋಲಾರ ಜಿಲ್ಲೆ. | ಡಿಜಿಓ | ವಿಮ್ಸ್ ಬಳ್ಳಾರಿ | ಜಿಎಂ |
| 85 | 104 | ಡಾ: ಜ್ಯೋತಿ ವೆಂಕಣ್ಣ ಬೇವಿನಮರದ್. ಪ್ರಾಆಕೇಂದ್ರ, ಶಿರಗುಪ್ಪಿ, ಧಾರವಾಡ ಜಿಲ್ಲೆ. | ಡಿಓಎಂಎಸ್ | ಕಿಮ್ಸ್, ಹುಬ್ಬಳ್ಳಿ. | ಎಸ್‌ಸಿ |
| 86 | 94 | ಡಾ: ನರೇಂದ್ರ ಕುಮಾರ್. ಹೆಚ್.ಎಸ್. ಪ್ರಾ.ಆ.ಕೇಂದ್ರ, ಹಿರಿಯಡ್ಕ ಉಡುಪಿ ಜಿಲ್ಲೆ. | ಡಿ(ಆರ್ಥೋ) | ಕಿಮ್ಸ್, ಹುಬ್ಬಳ್ಳಿ. | ಜಿಎಂ |
| 87 | 51 | ಡಾ: ಗಿರಿಜಾಂಬ. ಡಿ ಪ್ರಾ.ಆ.ಕೇಂದ್ರ, ಪಾಯದಹುಂಡಿ, ಚಾಮರಾಜನಗರ ಜಿಲ್ಲೆ. | ಡಿಟಿಸಿಡಿ | ಎಂಎಂಸಿ, ಮೈಸೂರು | ಜಿಎಂ |
| 88 | 121 | ಡಾಃ ದಶರಥ್ ಎಸ್.ಹೆಚ್ ಪ್ರಾಆಕೇಂದ್ರ, ಮಳಲಿ ಮುಧೋಳ್ ತಾಲ್ಲೂಕು ಬಾಗಲಕೋಟೆ ಜಿಲ್ಲೆ | ಡಿಸಿಹೆಚ್ | ಜೆಎನ್‌ಎಂಸಿ ಬೆಳಗಾಂ | ಜಿಎಂ |
| 89 | 118 | ಡಾಃ ಚಿದಾನಂದ ಹೆಚ್. ಗುಡೂರ್ ಸಆಕೇಂದ್ರ, ಗಜೇಂದ್ರಗಡ ಗದಗ ಜಿಲ್ಲೆ | ಡಿಸಿಹೆಚ್ | ಬಿಎಂಸಿ ಬೆಂಗಳೂರು | ಎಸ್‌ಸಿ |
| 90 | 107 | ಡಾಃ ರಮೇಶ ಡಿ.ಸಿ. ಪ್ರಾಆಕೇಂದ್ರ, ತೊಂಡೇಬಾವಿ ಗೌರಿಬಿದನೂರು ತಾಲ್ಲೂಕು ಕೋಲಾರ ಜಿಲ್ಲೆ | ಡಿಎಂಆರ್‌ಡಿ | ಜೆಎನ್‌ಎಂಸಿ ಬೆಳಗಾಂ | ಜಿಎಂ |
| 91 | 101 | ಡಾಃ ಮಂಜುನಾಥ್ ಕೆ.ಆರ್. ಪ್ರಾಆಕೇಂದ್ರ, ತಿಮ್ಮನಹಳ್ಳಿ ಚಿಕ್ಕನಾಯಕನಹಳ್ಳಿ ತಾಲ್ಲೂಕು ತುಮಕೂರು ಜಿಲ್ಲೆ | ಎಂಎಸ್ (ಆರ್ಥೋ) | ಜೆಎನ್‌ಎಂಸಿ ಬೆಳಗಾಂ | ಜಿಎಂ |
| 92 | 100 | ಡಾಃ ಮುರಳಿ ಮೋಹನ್ ಪ್ರಾಆಕೇಂದ್ರ, ವಾಟದಹೊಸಹಳ್ಳಿ ಗೌರಿಬಿದನೂರು ತಾಲ್ಲೂಕು ಕೋಲಾರ ಜಿಲ್ಲೆ | ಡಿಸಿಹೆಚ್ | ಜೆಎಸ್‌ಎಸ್ ಮೈಸೂರು | ಜಿಎಂ |
| 93 | 88 | ಡಾಃ ಗುರುಲಿಂಗಪ್ಪ ಉಪಾಸೆ ಪ್ರಾಆಕೇಂದ್ರ, ಇಂಚಗೇರಿ ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ | ಎಂಡಿ (ಅನಸ್ತೇ) | ಕೆಎಂಸಿ ಮಂಗಳೂರು | ಜಿಎಂ |

| 1 | 2 | 3 | 4 | 5 | 6 |
|---|---|---|---|---|---|
| 94 | 40 | ಡಾ॥ ಗಿರೀಶ್ ಕುಮಾರ್ ಚಡಗ ಸಾರ್ವಜನಿಕ ಆಸ್ಪತ್ರೆ, ಹೊನ್ನಾವರ ಉತ್ತರ ಕನ್ನಡ ಜಿಲ್ಲೆ | ಎಂಡಿ (ಪೀಡಿಯಾ) | ಎನೆಪೋಯಾ ಮೆಡಿಕಲ್ ಕಾಲೇಜು ಮಂಗಳೂರು | ಜಿಎಂ |

**ಸಿ.ಎಸ್.ಜಗದೀಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 876

## ಆರ್ಥಿಕ ಸಚಿವಾಲಯ

**ವಿಷಯ:** 5ನೇ ರಾಜ್ಯ ವೇತನ ಆಯೋಗದ ನೇಮಕಾತಿ ಕುರಿತು.

**ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ಪರಿಷ್ಕರಿಸಲು ಮತ್ತು ನೂತನ ವೇತನ ರಚನೆ ಇತ್ಯಾದಿಗಳನ್ನು ರೂಪಿಸಲು ಒಂದು ವೇತನ ಆಯೋಗವನ್ನು ರಚಿಸಲು ಸರ್ಕಾರವು ತೀರ್ಮಾನ ತೆಗೆದುಕೊಂಡಿದೆ.

2. ಸರ್ಕಾರವು ಈಗ "ಏಕ ಸದಸ್ಯ 5ನೇ ರಾಜ್ಯ ವೇತನ ಆಯೋಗ" ವನ್ನು ರಚಿಸಲು ಮತ್ತು ಶ್ರೀ ಸಿ. ಗೋಪಾಲರೆಡ್ಡಿ, ನಿವೃತ್ತ ಕೇಂದ್ರ ಸರ್ಕಾರದ ಕಾರ್ಯದರ್ಶಿ, ಇವರನ್ನು ಆಯೋಗದ ಅಧ್ಯಕ್ಷರನ್ನಾಗಿ ನೇಮಿಸಲು ಹರ್ಷಿಸುತ್ತದೆ.

3. ಆಯೋಗದ ಪರಿಶೀಲನಾರ್ಹ ಅಂಶಗಳು ಈ ಕೆಳಕಂಡಂತಿವೆ:

(ಎ) ರಾಜ್ಯ ಸರ್ಕಾರಿ ನೌಕರರ (ಅಧೀನ ನ್ಯಾಯಾಲಯಗಳ ನ್ಯಾಯಾಧಿಕಾರಿಗಳನ್ನು ಹೊರತುಪಡಿಸಿ), ಅನುದಾನಿತ ಶಿಕ್ಷಣ ಸಂಸ್ಥೆಗಳು, ಸ್ಥಳೀಯ ಸಂಸ್ಥೆಗಳು, ಯುಜಿಸಿ/ ಎಐಸಿಟಿಇ/ ಐಸಿಎಆರ್ ವೇತನ ಶ್ರೇಣಿ ಹೊಂದಿರುವವರನ್ನು ಹೊರತುಪಡಿಸಿ ವಿಶ್ವವಿದ್ಯಾನಿಲಯಗಳು ಮತ್ತು ಕಾಲೇಜುಗಳ ಬೋಧಕೇತರ ಸಿಬ್ಬಂದಿಗಳಿಗೆ ಮರಣ ಹಾಗೂ ನಿವೃತ್ತಿ ಉಪದಾನ ಸೌಲಭ್ಯಗಳನ್ನೊಳಗೊಂಡಂತೆ ಲಭ್ಯವಿರುವ ಎಲ್ಲಾ ಕ್ರೋಢೀಕೃತ ಸೌಲಭ್ಯಗಳನ್ನು ಗಣನೆಗೆ ತೆಗೆದುಕೊಂಡು, ಈ ಸಿಬ್ಬಂದಿಗಳ ಪ್ರಸ್ತುತ ವೇತನ ರಚನೆಯನ್ನು ಪರಿಶೀಲಿಸುವುದು ಹಾಗೂ ಅಪೇಕ್ಷಣೀಯವಾದ ಹಾಗೂ ಕಾರ್ಯ ಸಾಧ್ಯವಿರುವ ನೂತನ ವೇತನ ರಚನೆಯನ್ನು ರೂಪಿಸುವುದು.

(ಬಿ) ರಾಜ್ಯ ಸರ್ಕಾರವು ಅಳವಡಿಸಿಕೊಂಡಿರುವ ಪ್ರಸಕ್ತ ಕೇಂದ್ರ ಸರ್ಕಾರದ ತುಟ್ಟಿಭತ್ಯೆಯ ನೀತಿಗೆ ಸಂಬಂಧಿಸಿದಂತೆ ತುಟ್ಟಿಭತ್ಯೆಯ ಸೂತ್ರವನ್ನು ಪರಿಶೀಲಿಸುವುದು ಮತ್ತು ನಿರ್ಣಯಿಸುವುದು ಹಾಗೂ ಅಪೇಕ್ಷಣೆಯವಾದ ಹಾಗೂ ಕಾರ್ಯ ಸಾಧ್ಯವಿರುವ ಬದಲಾವಣೆಗಳನ್ನು ಮಾಡಲು ಸಲಹೆ ಮಾಡುವುದು.

(ಸಿ) ಮನೆ ಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆ, ವಿಶೇಷ ಭತ್ಯೆಗಳು ಇತ್ಯಾದಿ ಮತ್ತು ರಜೆ ಪ್ರಯಾಣ ರಿಯಾಯಿತಿ ಮತ್ತು ವೈದ್ಯಕೀಯ ಮರುಪಾವತಿ ಸೌಲಭ್ಯಗಳನ್ನೊಳಗೊಂಡಂತೆ ವಿವಿಧ ಭತ್ಯೆಗಳ ಪ್ರಮಾಣವನ್ನು ಪರಿಶೀಲಿಸುವುದು ಹಾಗೂ ಅಪೇಕ್ಷಣೆಯವಾದ ಹಾಗೂ ಕಾರ್ಯ ಸಾಧ್ಯವಿರುವ ಬದಲಾವಣೆಗಳನ್ನು ಮಾಡಲು ಸಲಹೆ ಮಾಡುವುದು.

(ಡಿ) ಪ್ರಸ್ತುತ ಜಾರಿಯಲ್ಲಿರುವ ನಿವೃತ್ತಿ ಸೌಲಭ್ಯಗಳನ್ನು ಪರಿಶೀಲಿಸುವುದು ಹಾಗೂ ಅಪೇಕ್ಷಣೀಯವಾದ ಹಾಗೂ ಕಾರ್ಯ ಸಾಧ್ಯವಿರುವ ಬದಲಾವಣೆಗಳನ್ನು ಮಾಡಲು ಸಲಹೆ ಮಾಡುವುದು.

(ಇ) ಆಯೋಗವು ಸಮುಚಿತವೆನಿಸುವ ಇನ್ನಿತರ ವಿಷಯಗಳನ್ನು ಪರಿಶೀಲಿಸಲು ಹಾಗೂ ಅವುಗಳ ಕುರಿತು ಶಿಫಾರಸ್ಸು ಮಾಡುವುದು.

4. ಆಯೋಗವು ತನ್ನ ಶಿಫಾರಸ್ಸುಗಳನ್ನು ಮಾಡುವಾಗ, 12ನೇ ಆರ್ಥಿಕ ಆಯೋಗವು ಮಾಡಿರುವ ಶಿಫಾರಸ್ಸುಗಳನ್ನು ಹಾಗೂ 2002ರ ಕರ್ನಾಟಕ ಆರ್ಥಿಕ ಹೊಣೆಗಾರಿಕೆ ಅಧಿನಿಯಮದಲ್ಲಿ ರಾಜಸ್ವ ಕೊರತೆ ಮತ್ತು ವಿತ್ತೀಯ ಕೊರತೆ ಬಗ್ಗೆ ನಿಗದಿಗೊಳಿಸಲಾಗಿರುವ ಪರಿಮಿತಿಗಳನ್ನು ಗಮನದಲ್ಲಿಟ್ಟುಕೊಳ್ಳತಕ್ಕದ್ದು. ಆಯೋಗವು ರಾಜ್ಯದ ಸಂಪನ್ಮೂಲಗಳು ಮತ್ತು ಯೋಜನೆ ಮತ್ತು ಯೋಜನೇತರ ವೆಚ್ಚಗಳಿಗಾಗಿ ಸರ್ಕಾರದ ಬದ್ಧತೆ ಮತ್ತು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದ ವರ್ಗಗಳ ಜೀವನ ಮಟ್ಟವನ್ನು ಸುಧಾರಿಸಲು ವಿವಿಧ ಯೋಜನೆಗಳನ್ನು ಅನುಷ್ಠಾನಗೊಳಿಸಲು ಹಮ್ಮಿಕೊಂಡಿರುವ ಕಾರ್ಯಕ್ರಮಗಳನ್ನು ಸಹ ಗಮನದಲ್ಲಿರಿಸಿಕೊಳ್ಳತಕ್ಕದ್ದು. ಆಯೋಗವು ಕೇಂದ್ರ ಸರ್ಕಾರದ ನೌಕರರ ಮತ್ತು ಇತರ ನೆರೆರಾಜ್ಯಗಳ ನೌಕರರ ವೇತನ ಶ್ರೇಣಿಗಳು ಮತ್ತು ರಾಜ್ಯಗಳು ಒಟ್ಟು ರಾಜಸ್ವದ ಶೇಕಡ ಎಷ್ಟು ಪ್ರಮಾಣದಲ್ಲಿ ವೇತನಗಳ ಮೇಲೆ ವೆಚ್ಚ ಮಾಡುತ್ತಿದೆ ಎಂಬ ಅಂಶಗಳನ್ನು ಸಹ ಗಮನದಲ್ಲಿರಿಸಿಕೊಳ್ಳತಕ್ಕದ್ದು ಮತ್ತು ರಾಜ್ಯ ಸರ್ಕಾರದ/ ಸ್ಥಳೀಯ ಸಂಸ್ಥೆಗಳ ಆರ್ಥಿಕ ಸಾಮರ್ಥ್ಯ, ಇತರೆ ಸಂಬಂಧಿಸಿದ ಅಂಶಗಳನ್ನು ಲೆಕ್ಕಕ್ಕೆ ತೆಗೆದುಕೊಂಡು, ತನ್ನ ಶಿಫಾರಸ್ಸುಗಳನ್ನು ಮಾಡುವುದು. ವಿಶೇಷವಾಗಿ, ರಾಜ್ಯದ ಅಭಿವೃದ್ಧಿ ಅವಶ್ಯಕತೆ ಮತ್ತು ಇತರ ಅವಶ್ಯಕತೆಗಳನ್ನು ಗಮನದಲ್ಲಿರಿಸಿಕೊಂಡು ತನ್ನ ನೌಕರರಿಗೆ ವೇತನ ನೀಡಲು ರಾಜ್ಯ ಸರ್ಕಾರದ ಸಾಮರ್ಥ್ಯವನ್ನು ಆಯೋಗವು ಗಮನದಲ್ಲಿರಿಸಿಕೊಳ್ಳುವುದು.

5. ಆಯೋಗವು ತನ್ನದೇ ಆದ ಕಾರ್ಯವಿಧಾನಗಳನ್ನು ರೂಪಿಸಿಕೊಳ್ಳುವುದು. ಸರ್ಕಾರದ ಎಲ್ಲಾ ಇಲಾಖೆಗಳು ಆಯೋಗವು ಬಯಸುವ ಎಲ್ಲಾ ಮಾಹಿತಿ ಮತ್ತು ದಾಖಲೆಗಳನ್ನು ಮತ್ತು ಇತರ ಸಹಾಯವನ್ನು ಒದಗಿಸುವುದು. ಸೇವಾ ಸಂಘಗಳು, ಸ್ಥಳೀಯ ಸಂಸ್ಥೆಗಳು, ಅನುದಾನಿತ ಸಂಸ್ಥೆಗಳು ಮತ್ತು ಇತರ ಸಂಬಂಧಪಟ್ಟವರು ಆಯೋಗಕ್ಕೆ ಅವರ ಸಹಕಾರ ಮತ್ತು ಸಹಾಯವನ್ನು ವಿಸ್ತರಿಸುತ್ತವೆ ಎಂದು ಸರ್ಕಾರವು ನಿರೀಕ್ಷಿಸುತ್ತದೆ.

6. ಆಯೋಗವು ತನ್ನ ವರದಿಯನ್ನು ಆದಷ್ಟು ಬೇಗ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಧಾಕರ್‌ರಾವ್**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,

ಆರ್ಥಿಕ ಇಲಾಖೆ.

ಪಿ.ಆರ್. 949

## ಆರ್ಥಿಕ ಸಚಿವಾಲಯ

**ವಿಷಯ:** ಕೆಲವೊಂದು ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ನೀಡುವ ಕುರಿತು 2005ನೇ ಅಧಿಕಾರಿ ಸಮಿತಿಯು ಮಾಡಿರುವ ಶಿಫಾರಸ್ಸುಗಳನ್ನು ಜಾರಿಗೊಳಿಸುವುದು.

**ಪೀಠಿಕೆ:**

1998ರ ಅಧಿಕಾರಿ ವೇತನ ಸಮಿತಿಯ ಶಿಫಾರಸ್ಸುಗಳಿಗೆ ಅನುಗುಣವಾಗಿ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿ ಮತ್ತು ಭತ್ಯೆಗಳನ್ನು ದಿನಾಂಕ 1–4–1998 ರಿಂದ ಜಾರಿಗೆ ಬರುವಂತೆ ಪರಿಷ್ಕೃತಗೊಳಿಸಿದ ನಂತರ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ ಹಾಗೂ ಇತರ ಸೇವಾ ಸಂಘಗಳು ವೇತನ ಶ್ರೇಣಿಗಳನ್ನು ನಿಗದಿಗೊಳಿಸುವಲ್ಲಿ ಆಗಿರುವ ತಾರತಮ್ಯವನ್ನು ನಿವಾರಿಸಲು ಹಾಗೂ ವಿಶೇಷ ಭತ್ಯೆ ಹಾಗೂ ಇತರ ಭತ್ಯೆಗಳನ್ನು ಪರಿಷ್ಕರಣೆ ಮಾಡುವಂತೆ ಕೋರಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿದರು.

2000–01ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಅಂದಿನ ಮಾನ್ಯ ಮುಖ್ಯ ಮಂತ್ರಿಗಳು ಮಾಡಿದ ಘೋಷಣೆಯ ಹಿನ್ನೆಲೆಯಲ್ಲಿ, ಸರ್ಕಾರವು ದಿನಾಂಕ 4–1–2003 ಮತ್ತು 6–8–2004ರ ಆದೇಶಗಳನ್ನು ಓದಿಕೊಂಡಂತೆ, ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 13 ಎಸ್‌ಆರ್‌ಪಿ 2000 ದಿನಾಂಕ:17–6–2000ದಲ್ಲಿ, 1998ರ ಅಧಿಕಾರಿ ವೇತನ ಸಮಿತಿಯ ವರದಿಯ ಅನುಷ್ಠಾನದಿಂದ ಉದ್ಭವಿಸಲಾಗಿರುವ ವಿಷಯಗಳ ಕುರಿತು ರಾಜ್ಯ ಸರ್ಕಾರಿ ನೌಕರರ ದೂರುಗಳನ್ನು ಪರಿಶೀಲಿಸುವ ಸಲುವಾಗಿ ಅಧಿಕಾರಿ ಸಮಿತಿಯೊಂದನ್ನು ರಚಿಸಲಾಯಿತು. ಈ ವಿಷಯದಲ್ಲಿ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಅಧಿಕಾರಿ ಸಮಿತಿಯು ಕೆಲವೊಂದು ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಯನ್ನು ಶಿಫಾರಸ್ಸು ಮಾಡಿದೆ. ಈ ಕುರಿತು ಮಾಡಲಾಗಿರುವ ಅಧಿಕಾರಿ ಸಮಿತಿಯ ಶಿಫಾರಸ್ಸುಗಳನ್ನು ಸರ್ಕಾರವು ಒಪ್ಪಿಕೊಂಡಿದೆ. ಅದರಂತೆ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2000, ಬೆಂಗಳೂರು, ದಿನಾಂಕ 9ನೇ ಜೂನ್, 2005**

ಕರ್ನಾಟಕ ನಾಗರಿಕ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1999ರ ನಿಯಮ 4ರ ಉಪ–ನಿಯಮ (2)ರ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿದ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯನ್ನು ಅನುಬಂಧದ ಅಂಕಣ (5) ರಲ್ಲಿ ನಮೂದಿಸಿರುವ ಪರಿಷ್ಕೃತ ವೇತನ ಶ್ರೇಣಿಗೆ ಬದಲಾಗಿ ಅಂಕಣ (6) ರಲ್ಲಿ ನಮೂದಿಸಿರುವ ಸಂವಾದಿ ಪರಿಷ್ಕೃತ ವೇತನ ಶ್ರೇಣಿ ಆಗಿರತಕ್ಕದ್ದೆಂದು ಈ ಮೂಲಕ ಆದೇಶಿಸಿದೆ.

2. ಈ ಆದೇಶದ ಮೂಲಕ ಮಂಜೂರು ಮಾಡಲಾದ ಪರಿಷ್ಕೃತ ವೇತನ ಶ್ರೇಣಿಗಳು ಕೂಡಲೇ ಜಾರಿಗೆ ಬರುತ್ತವೆ.

3. ಈ ಅನುಬಂಧದಲ್ಲಿ ನಮೂದಿಸಿರುವ ಹುದ್ದೆಗಳನ್ನು ಧಾರಣ ಮಾಡಿದ ಅಧಿಕಾರಿಗಳ ವೇತನವನ್ನು ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 43 ರಲ್ಲಿ ಕಲ್ಪಿಸಿರುವ ಅವಕಾಶಗಳ ಅನುಸಾರ ನಿಗದಿಪಡಿಸತಕ್ಕದ್ದು.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಟಿ.ನಾಯ್ಕ್**

ಸರ್ಕಾರದ ಉಪಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2).

## FINANCE SECRETARIAT

**Subject:** Implementation of the recommendations of the Official Committee 2005 regarding upward revision of the scales of pay of certain categories of posts.

**PREAMBLE:**

Consequent upon revision of scales of pay and allowances of State Government employees with effect from 1st April 1998 on the basis of the recommendations of the Official Pay Committee, 1998, Karnataka State Government Employees' Association and other Service Associations had requested for removal of what they considered as anomalies in the allocation of pay scales to certain categories of posts and for enhancement/revision of the rates of special allowance and various other allowances.

In pursuance of the announcement made by the then Hon'ble Chief Minister in his Budget Speech 2000-2001, Government constituted an Official Committee to examine the grievances of State Government employees relating to matters arising out of implementation of the report of the Official Pay Committee 1998 vide Government Order No. FD 13 SRP 2000 dated 17th June 2000 read with Government Order of even number dated 4th January 2003 and 6th August 2004. After detailed examination of all the aspects of the matter, the Official Committee has recommended an upward revision of the scales of pay of certain categories of posts. Government have accepted the recommendations of the Official Committee in this regard. Accordingly, the following orders are issued.

**GOVERNMENT ORDER NO. FD, 13 SRP, 2000, BANGALORE, DATED 9TH JUNE 2005**

In exercise of the powers conferred by sub-rule (2) of Rule 4 of the Karnataka Civil Services (Revised Pay) Rules, 1999, Government of Karnataka hereby order that the scale of pay applicable to the post specified in Column No.3 of Annexure shall be the revised scale mentioned in the corresponding entry in Column No.6 therein in substitution of the revised scale mentioned in Column No.5 *ibid*.

ಆಟೋವನ್ನು ಹಿಡಿದಿರುತ್ತಾರೆ. ಈ ಅಪಘಾತದಲ್ಲಿ ಸ್ಕೂಟರ್ ಚಾಲಕನ ಎಡಗೈ ಕಿರುಬೆರಳು ಹಾಗೂ ಎಡಕಾಲು ಪಾದದ ಹತ್ತಿರ ತೀವ್ರ ಸ್ವರೂಪದ ಗಾಯಗಳಾಗಿರುತ್ತದೆ. ಇದು ನಿಮ್ಮ ದುರ್ನಡತೆಯನ್ನು ತೋರಿಸುತ್ತದೆ. "

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಆರೋಪ ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಯ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು (ಕೇಂದ್ರ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:12-03-2004ರ ಆದೇಶದಲ್ಲಿ, ಅರ್ಜಿದಾರರಿಗೆ ಸೇವೆಯಿಂದ ಕಡ್ಡಾಯ ನಿವೃತ್ತಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯಲ್ಲಿ ಯಾವುದೇ ಗುಣಮಟ್ಟದ ಅಂಶಗಳಿಲ್ಲದಿರುವ ಕಾರಣ, ಶಿಸ್ತು ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದು, ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:09-08-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಯಾವುದೇ ಆರೋಪವನ್ನು ಅಲ್ಲಗಳೆಯುವ ಆಧಾರಗಳನ್ನು ಮಂಡಿಸದೆ, ಕೇವಲ ವೈಯಕ್ತಿಕ ಹಾಗೂ ಆರ್ಥಿಕ ತೊಂದರೆಗಳ ಬಗ್ಗೆ ಮನವಿ ಸಲ್ಲಿಸಿರುತ್ತಾರೆ. ಅರ್ಜಿದಾರರು ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ತಾನು ನಿರಪರಾಧಿ ಎಂದು ಸಾಬೀತು ಪಡಿಸಲು ಯಾವುದೇ ಹೊಸ ಅಂಶಗಳನ್ನು ಹಾಜರುಪಡಿಸದೆ ಇರುವ ಕಾರಣ, ಶಿಸ್ತು ಪ್ರಾಧಿಕಾರಿಯ ಆದೇಶದಲ್ಲಿ ಯಾವುದೇ ಹಸ್ತಕ್ಷೇಪ ಮಾಡುವ ಅಗತ್ಯ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 188 ಪೊಸಿಅ 2004, ಬೆಂಗಳೂರು, ದಿನಾಂಕ: 13ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್(ಶಿಸ್ತು ನಡವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ವೆಂಕಟೇಶ್ ಮಾಜಿ ಪಿಸಿ 1144, ಸಿಎಆರ್ (ಕೇಂದ್ರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 736

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಸಮಾಜ ಕಲ್ಯಾಣ ಸಚಿವಾಲಯ**

**ಸುತ್ತೋಲೆ ಸಂಖ್ಯೆ: ಸಕಇ 60 ಬಿಸಿಎ 2004, ಬೆಂಗಳೂರು, ದಿನಾಂಕ: 28ನೇ ಮಾರ್ಚ್ 2005**

**ವಿಷಯ:** ಎಲ್ಲಾ ಉದ್ದೇಶಗಳಿಗಾಗಿ ಜಾತಿ, ಜಾತಿ ಮತ್ತು ಆದಾಯ ಪ್ರಮಾಣ ಪತ್ರ ನೀಡುವ ಕುರಿತು ಭೌತಿಕ ಸತ್ಯಮಾಪನ ಕುರಿತು.

ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿಗಳು ಮತ್ತು ಮುಂತಾದವುಗಳ ಮೀಸಲಾತಿ) (ತಿದ್ದುಪಡಿ) ನಿಯಮಗಳು, 2000ರ ನಿಯಮ 3(ಎ)(2) ಪ್ರಕಾರ ತಹಶೀಲ್ದಾರರು ಅರ್ಜಿ ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳೊಳಗಾಗಿ, ನಮೂನೆ D,E,F,ಗಳಲ್ಲಿ ವ್ಯಾಸಂಗ, ಉದ್ಯೋಗ ಮತ್ತಿತರ ಎಲ್ಲಾ ಉದ್ದೇಶಗಳಿಗಾಗಿ ಜಾತಿ ಅಥವಾ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ನೀಡತಕ್ಕದೆಂದು ಶೃತಪಡಿಸಲಾಗಿದೆ.

ಕೆಲವು ತಹಶೀಲ್ದಾರರು ನಿಯಮಗಳನ್ನು ಅನುಸರಿಸದೇ ಅನೇಕ ನಮೂನೆಗಳಲ್ಲಿ ಇಂತಹ ಪ್ರಮಾಣ ಪತ್ರಗಳನ್ನು ನೀಡುತ್ತಿರುವುದಷ್ಟೇ ಅಲ್ಲದೆ ಪೂರ್ವಭಾವಿ ಪರಿಶೀಲನೆ ನಡೆಯಿಸದೇ ಅರ್ಜಿ ಸಲ್ಲಿಸಿದ ದಿನವೇ ಪ್ರಮಾಣ ಪತ್ರಗಳನ್ನು ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ತಾಲ್ಲೂಕು ಕಛೇರಿಗಳಲ್ಲಿ ಸಾಮಾನ್ಯವಾಗಿ ಭೌತಿಕ ಪರಿಶೀಲನೆ ನಡೆಯಿಸಿ ಇಂತಹ ಪ್ರಮಾಣ ಪತ್ರಗಳನ್ನು ನೀಡುವುದಕ್ಕೆ ಈ ಕೆಳಕಂಡ ತಪಶೀಲಿನಲ್ಲಿ ಕಾಣಿಸಿರುವಂತೆ ಕನಿಷ್ಟ ಹತ್ತು ದಿನಗಳ ಕಾಲಾವಧಿಯು ಅವಶ್ಯವೆಂದು ಸ್ಪಷ್ಟಪಡುತ್ತದೆ.

| | | |
|---|---|---|
| 1. | ಅರ್ಜಿದಾರರು ತಾಲ್ಲೂಕು ಕಛೇರಿಯಲ್ಲಿ ಅರ್ಜಿಸಲ್ಲಿಸುವುದು. | 1(ಒಂದು) ದಿನ |
| 2. | ಅರ್ಜಿಯನ್ನು ವರದಿಗಾಗಿ ಗ್ರಾಮಲೆಕ್ಕಿಗರಿಗೆ ಕಳಿಸಿರುವುದಕ್ಕೆ ಅಗತ್ಯ ಕಾಲಾವಧಿ | 3ನೇ (ಮೂರು) ದಿನ |
| 3. | ಸ್ಥಳೀಯ ವಿಚಾರಣೆಯನ್ನು ಪೂರ್ಣಗೊಳಿಸಿ, ಗ್ರಾಮ ಲೆಕ್ಕಿಗರು ಕಡತವನ್ನು ರಾಜಸ್ವ ನಿರೀಕ್ಷಕರಿಗೆ ಕಳಿಸಲು ಬೇಕಾದ ಕಾಲಾವಧಿ | 5ನೇ (ಐದು) ದಿನ |
| 4. | ರಾಜಸ್ವ ನಿರೀಕ್ಷಕರು ಸ್ಥಳೀಯ ವಿಚಾರಣೆ ನಡೆಸಿ, ಕಡತವನ್ನು ತಹಶೀಲ್ದಾರರಿಗೆ ವರದಿಯೊಂದಿಗೆ ಸಲ್ಲಿಸಲು ಬೇಕಾಗುವ ಕಾಲಾವಧಿ. | 7ನೇ (ಏಳು) ದಿನ |
| 5. | ತಹಶೀಲ್ದಾರರ ಕಛೇರಿಯಲ್ಲಿ ಪ್ರಮಾಣ ಪತ್ರ ಅಥವಾ ಸೂಕ್ತ ಹಿಂಬರಹ ನೀಡಲು ಬೇಕಾಗುವ ಕಾಲಾವಧಿ. | 10ನೇ (ಹತ್ತು) ದಿನ |

ಯಾವುದೇ ಜಾತಿ ಅಥವಾ ಜಾತಿ ಮತ್ತು ಆದಾಯ ಪ್ರಮಾಣ ಪತ್ರ ನೀಡಲು ಮೇಲಿನ ಕೋಷ್ಟಕದಲ್ಲಿ ತೋರಿಸಿದಂತೆ ಅರ್ಜಿ ಪರಿಶೀಲನೆ ಮತ್ತು ತಪಾಸಣೆಗಾಗಿ ಕನಿಷ್ಟ 10 ದಿನಗಳ ಕಾಲಾವಧಿಯು ಬೇಕಾಗುವುದೆಂದು ಭಾವಿಸಲಾಗಿದೆ. ಆದ್ದರಿಂದ ಪೂರ್ವಭಾವಿ ಪರಿಶೀಲನೆ ಮಾಡದೇ ಅರ್ಜಿ ಸ್ವೀಕರಿಸಿದ ದಿನವೇ ಜಾತಿ ಹಾಗೂ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ನೀಡಿದ್ದಲ್ಲಿ ಅಂತಹ ತಹಶೀಲ್ದಾರರು ನಿಯಮಾನುಸಾರ ಶಿಸ್ತು ಕ್ರಮಕ್ಕೊಳಗಾಗುವರು.

**ಎಂ.ಎಸ್. ಮರುಳಸಿದ್ಧಯ್ಯ**

ಪಿ.ಆರ್. 737

ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

**ಕಾರ್ಮಿಕ ಸಚಿವಾಲಯ**

**ವಿಷಯ:** ಕಾರ್ಮಿಕ ಇಲಾಖೆಯ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು 2005-06ನೇ ಆರ್ಥಿಕ ವರ್ಷಕ್ಕೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಪತ್ರ ಸಂಖ್ಯೆ:ಎಸಿಟಿ-1/ಸಿಆರ್-6/2005-06 ದಿನಾಂಕ:15-4-2005 ಕಾರ್ಮಿಕ ಆಯುಕ್ತರು, ಬೆಂಗಳೂರು ಇವರಿಂದ
2. ದಿನಾಂಕ:28-4-2005ರಂದು ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಮುಂದುವರೆದ ಯೋಜನೆಗಳನ್ನು ಮುಂದುವರೆಸಲು ಮಂಜೂರಾತಿ ನೀಡುವ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:-**

ಮೇಲೆ ಕ್ರಮ ಸಂ:(1)ರಲ್ಲಿ ಓದಲಾದ ಕಾರ್ಮಿಕ ಆಯುಕ್ತರ ದಿನಾಂಕ:15-4-2005ರ ಪತ್ರದಲ್ಲಿ ಕಾರ್ಮಿಕ ಇಲಾಖೆಗೆ ಸಂಬಂಧಿಸಿದ 2004-05ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಮತ್ತು ಯೋಜನೆ ಅಡಿ ಮುಂದುವರೆಸಲಾದ ಹುದ್ದೆಗಳನ್ನು 2005-06ನೇ ಸಾಲಿನಲ್ಲಿ ಮುಂದುವರೆಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. 2004-05ನೇ ಸಾಲಿನಲ್ಲಿ ಯೋಜನಾ ಕಾರ್ಯಕ್ರಮಗಳನ್ನು ಮತ್ತು ಯೋಜನೆ ಅಡಿ ಇರುವ ಹುದ್ದೆಗಳನ್ನು 2005-06ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ ಕಾರ್ಮಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ:28-4-2005 ರಂದು ನಡೆದ ಸಭೆಯಲ್ಲಿ ವಿವರವಾಗಿ ಚರ್ಚಿಸಿ, ಯೋಜನೆ ಲೆಕ್ಕ ಶೀರ್ಷಿಕೆ 2230-01-101-0-01 ಇದರ ಅಡಿಯಲ್ಲಿ 53 ಹುದ್ದೆಗಳನ್ನು 2005-06ನೇ ಸಾಲಿಗೆ ಮುಂದುವರೆಸಲು ಹಾಗೂ ಈ ಲೆಕ್ಕ ಶೀರ್ಷಿಕೆಯ ಉಪ ಶೀರ್ಷಿಕೆ 051 ಸಾಮಾನ್ಯ ವೆಚ್ಚಗಳು ಇದರ ಅಡಿಯಲ್ಲಿ ಕಾರ್ಮಿಕ ಭವನದ ಭದ್ರತೆ, ಸ್ವಚ್ಛತೆ, ಸಿಬ್ಬಂದಿ ವೇತನ ಮತ್ತು ಆಧುನೀಕರಣ ಯೋಜನೆಗಳನ್ನು ಮುಂದುವರೆಸಲು ಸಭೆಯು ತೀರ್ಮಾನಿಸಿತು. ಕಾರ್ಮಿಕ ಆಯುಕ್ತರು ಮುಂದುವರೆಸಲು ಪ್ರಸ್ತಾಪಿಸಿದ ಬಾಲ ಕಾರ್ಮಿಕ ನಿರ್ಮೂಲನಾ ಪದ್ಧತಿ ಕ್ರಿಯಾ ಯೋಜನೆ ಮತ್ತು ಕಾರ್ಮಿಕ ಭವನದ 1ನೇ ಹಂತದ ಉಳಿದ ಕಾಮಗಾರಿ ಯೋಜನೆಗಳಿಗೆ 2005-06ನೇ ಸಾಲಿನಲ್ಲಿ ಆಯವ್ಯಯ ಒದಗಿಸದೇ ಇರುವುದರಿಂದ, ಅವುಗಳಿಗೆ ಆರ್ಥಿಕ ಇಲಾಖೆಯಿಂದ ಹೆಚ್ಚುವರಿ ಆಯವ್ಯಯ ಒದಗಿಸಿದ ನಂತರ ಮುಂದುವರೆಸುವ ಬಗ್ಗೆ ಪರಿಶೀಲಿಸಬಹುದಾಗಿದೆಯೆಂದು ಮತ್ತು 2005-06ನೇ ಸಾಲಿಗೆ ಈ ಯೋಜನೆಗಳಿಗೆ ಆಯವ್ಯಯ ಲಭ್ಯವಿಲ್ಲದ ಕಾರಣ, ಸಧ್ಯಕ್ಕೆ ಈ ಯೋಜನೆಗಳನ್ನು ಮುಂದುವರೆಸುವ ಅವಶ್ಯಕತೆ ಇಲ್ಲವೆಂದು ಸಭೆಯು ನಿರ್ಣಯಿಸಿರುತ್ತದೆ. ದಿನಾಂಕ:28-4-2005ರ ಸಭೆಯಲ್ಲಿ ತೀರ್ಮಾನಿಸಿದಂತೆ ಯೋಜನೆ ಅಡಿಯಲ್ಲಿ ಇರುವ 53 ಹುದ್ದೆಗಳನ್ನು ಹಾಗೂ ಕಾರ್ಮಿಕ ಭವನದ ಭದ್ರತೆ, ಸ್ವಚ್ಛತೆ, ಸಿಬ್ಬಂದಿ ವೇತನ ಮತ್ತು ಆಧುನೀಕರಣ ಯೋಜನಾ ಕಾರ್ಯಕ್ರಮಗಳನ್ನು 2005-06ನೇ ಸಾಲಿಗೆ ಮುಂದುವರೆಸಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 94 ಎಲ್ಇಟಿ 2005, ಬೆಂಗಳೂರು, ದಿನಾಂಕ: 6ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಹಾಗೂ ದಿನಾಂಕ:28-4-2005ರಂದು ನಡೆದ ಸಭೆಯ ನಡವಳಿಯಂತೆ ಕಾರ್ಮಿಕ ಇಲಾಖೆಗೆ ಸಂಬಂಧಿಸಿದಂತೆ 2004-05ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಮತ್ತು ಯೋಜನೆ ಅಡಿ ಇರುವ ಹುದ್ದೆಗಳನ್ನು 2005-06ನೇ ಸಾಲಿನಲ್ಲಿ ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿ ಇರುವಂತೆ ಮುಂದುವರೆಸಲು ಸರ್ಕಾರ ಈ ಕೆಳಕಾಣಿಸಿದ ಷರತ್ತುಗಳಿಗೆ ಒಳಪಟ್ಟು ಮಂಜೂರಾತಿ ನೀಡಿದೆ.

1) 2004-05ನೇ ಸಾಲಿನಲ್ಲಿ ಹೊಸದಾಗಿ ಮಂಜೂರಾದ ಯೋಜನಾ ಕಾರ್ಯಕ್ರಮಗಳನ್ನು ಮಾತ್ರ 2005-06ನೇ ಸಾಲಿನಲ್ಲಿ ಮುಂದುವರೆಸಬೇಕು
2) 2004-05ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಹುದ್ದೆಗಳು ರದ್ದಾಗಿದ್ದಲ್ಲಿ, ಅಂತಹವುಗಳನ್ನು 2005-06ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳಿಂದ ತೆಗೆದು ಹಾಕುವುದು ಹಾಗೂ 2004-05ನೇ ಸಾಲಿನಲ್ಲಿ ಯೋಜನಾ ಕಾರ್ಯಕ್ರಮವನ್ನು ಕೈಬಿಟ್ಟಿದ್ದರೆ, ಅಂತಹ ಕಾರ್ಯಕ್ರಮಗಳನ್ನು 2005-06ನೇ ಸಾಲಿನಲ್ಲಿ ಯೋಜನೆ ಅಡಿಯಲ್ಲಿ ಮುಂದುವರೆದ ಕಾರ್ಯಕ್ರಮಗಳ ಪಟ್ಟಿಯಿಂದ ತೆಗೆದು ಹಾಕಬೇಕು.
3) ಮುಂದುವರೆದ ಯೋಜನಾ ಕಾರ್ಯಕ್ರಮಗಳಲ್ಲಿ ಯಾವುದೇ ಹೊಸ ಘಟಕಗಳ ಪ್ರಸ್ತಾವನೆಗಳು ಇದ್ದಲ್ಲಿ, ಅವುಗಳಿಗೆ ಪ್ರತ್ಯೇಕವಾದ ಪ್ರಸ್ತಾವನೆಗಳನ್ನು ಸಲ್ಲಿಸಿ, ನಿಯಮಾನುಸಾರ ಮಂಜೂರಾತಿ ಪಡೆಯಬೇಕು.
4) ಕೇಂದ್ರ ಪರಿಷ್ಕೃತ ಹಾಗೂ ಕೇಂದ್ರ ಯೋಜನಾ ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರವು 2005-06ನೇ ಸಾಲಿನಲ್ಲಿ ಮುಂದುವರೆಸುವುದನ್ನು ಮತ್ತು ಕೇಂದ್ರ ಸರ್ಕಾರವು 2005-06ನೇ ಸಾಲಿನ ಲೇಖಾನುದಾನ ಆಯವ್ಯಯದಲ್ಲಿ ಹಣ ಒದಗಿಸಿರುವುದನ್ನು ಖಚಿತಪಡಿಸಿಕೊಂಡ ನಂತರ, 2005-06ನೇ ಸಾಲಿನಲ್ಲಿ ಇಂತಹ ಯೋಜನಾ ಕಾರ್ಯಕ್ರಮಗಳನ್ನು ಮುಂದುವರೆಸಬೇಕು.
5) ಆರ್ಥಿಕ ಇಲಾಖೆಯು ಕಾಲಕಾಲಕ್ಕೆ ಹೊರಡಿಸುವ ಆರ್ಥಿಕ ಮಿತವ್ಯಯ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಂ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10-7-96 ರನ್ವಯ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ಮಠಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ.

## ಅನುಬಂಧ

| ಕ್ರ. ಸಂ. | ಯೋಜನೆಯ ಹೆಸರು | ಯೋಜನೆಯನ್ನು ಮಂಜೂರು ಮಾಡಿದ ಸರ್ಕಾರಿ ಆದೇಶ ಸಂಖ್ಯೆ ಹಾಗೂ ದಿನಾಂಕ | 2005-2006ನೇ ಸಾಲಿನಲ್ಲಿ ವೆಚ್ಚವನ್ನು ಭರಿಸಬೇಕಾದ ಲೆಕ್ಕಶೀರ್ಷಿಕೆ | ಮೂಲತಃ ಮಂಜೂರಾದ ಹುದ್ದೆಗಳ ಸಂಖ್ಯೆ | | ಯೋಜನೆಯಡಿಯಲ್ಲಿ 2005-06ನೇ ಸಾಲಿನಲ್ಲಿ ಮುಂದುವರೆಸಬೇಕಾದ ಹುದ್ದೆಗಳು | | 2005-2006ನೇ ಸಾಲಿನಲ್ಲಿ ಯೋಜನೆಗೆ ಒದಗಿಸಿರುವ ಮೊತ್ತ ರೂ. ಲಕ್ಷಗಳಲ್ಲಿ |
|---|---|---|---|---|---|---|---|---|
| 1. | ಕಾರ್ಮಿಕ ಕಾನೂನುಗಳ ಸಮಾಚರಣೆ | ಸಂಖ್ಯೆ:ಸಿಆಸುಇ 3 ಸಸಿಎ 97 ದಿನಾಂಕ 17.6.1997 | 2230-01-101-0-01 | 1. ವಿಶೇಷಾಧಿಕಾರಿ, ಬಾಲಕಾರ್ಮಿಕ ಕೋಶ | 1 | 1. ಉಪ ವಿಶೇಷಾಧಿಕಾರಿ, ಬಾಲಕಾರ್ಮಿಕ ಕೋಶ | 1 | 27.09 |
| | | | | 2. ಉಪ ವಿಶೇಷಾಧಿಕಾರಿ, ಬಾಲ ಕಾರ್ಮಿಕ ಕೋಶ | 1 | 2. ಸಹಾಯಕರು | 2 | |
| | | | | 3. ಸಹಾಯಕರು | 2 | 3. ಶೀಘ್ರಲಿಪಿಗಾರರು | 1 | |
| | | | | 4. ಶೀಘ್ರಲಿಪಿಗಾರರು | 1 | 4. ವಾಹನ ಚಾಲಕರು | 1 | |
| | | | | 5. ವಾಹನ ಚಾಲಕರು | 1 | 5. ಗ್ರೂಪ್-ಡಿ ನೌಕರರು | 2 | |
| | | | | 6. ಗ್ರೂಪ್-ಡಿ ನೌಕರರು | 2 | | | |
| | | | | ಒಟ್ಟು | 8 | ಒಟ್ಟು | 7 | |
| 2. | ” | ಸಂಖ್ಯೆ:ಕಾಇ 314 ಎಲ್ಇಟಿ 98 ದಿನಾಂಕ 18.9.1998 | 2230-01-101-0-01 | ದ್ವಿತೀಯ ದರ್ಜೆ ಸಹಾಯಕರು | 13 | ದ್ವಿತೀಯ ದರ್ಜೆ ಸಹಾಯಕರು<br>1. ಕಾರ್ಮಿಕ ಅಧಿಕಾರಿ ಕಚೇರಿ - ಬಾಗಲಕೋಟೆ<br>2. ಕಾರ್ಮಿಕ ಅಧಿಕಾರಿ ಕಚೇರಿ - ಕೊಪ್ಪಳ<br>3. ಕಾರ್ಮಿಕ ಅಧಿಕಾರಿ ಕಚೇರಿ - ಚಿಕ್ಕಮಗಳೂರು<br>4. ಕಾರ್ಮಿಕ ಅಧಿಕಾರಿ ಕಚೇರಿ ಉಪವಿಭಾಗ-2, ಬಳ್ಳಾರಿ<br>5. ಕಾರ್ಮಿಕ ಅಧಿಕಾರಿ ಕಚೇರಿ ಉಪವಿಭಾಗ-2, ಮಂಡ್ಯ | 1 | |
| 3. | ” | ” | ” | ಶೀಘ್ರಲಿಪಿಗಾರರು | 13 | ಶೀಘ್ರಲಿಪಿಗಾರರು<br>1. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ-6, ಬೆಂ.,<br>2. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ-2, ಮಂಗಳೂರು.<br>3. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ-2, ಹುಬ್ಬಳ್ಳಿ<br>4. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ-2, ಬಿಜಾಪುರ<br>5. ಕಾರ್ಮಿಕ ಅಧಿಕಾರಿ ಕಛೇರಿ,ಉಪ ವಿಭಾಗ-2, ಬಳ್ಳಾರಿ<br>6. ಕಾರ್ಮಿಕ ಅಧಿಕಾರಿ ಕಛೇರಿ, ಚಾಮರಾಜನಗರ<br>7. ಕಾರ್ಮಿಕ ಅಧಿಕಾರಿ ಕಛೇರಿ, ಕೊಪ್ಪಳ<br>8. ಕಾರ್ಮಿಕ ಅಧಿಕಾರಿ ಕಛೇರಿ, ಬಾಗಲಕೋಟೆ | 1 | |

| ಕ್ರ. ಸಂ. | ಯೋಜನೆಯ ಹೆಸರು | ಯೋಜನೆಯನ್ನು ಮಂಜೂರು ಮಾಡಿದ ಸರ್ಕಾರಿ ಆದೇಶ ಸಂಖ್ಯೆ ಹಾಗೂ ದಿನಾಂಕ | 2005-2006ನೇ ಸಾಲಿನಲ್ಲಿ ವೆಚ್ಚವನ್ನು ಭರಿಸಬೇಕಾದ ಲೆಕ್ಕಶೀರ್ಷಿಕೆ | ಮೂಲತಃ ಮಂಜೂರಾದ ಹುದ್ದೆಗಳ ಸಂಖ್ಯೆ | | ಯೋಜನೆಯಡಿಯಲ್ಲಿ 2005-06ನೇ ಸಾಲಿನಲ್ಲಿ ಮುಂದುವರೆಸಬೇಕಾದ ಹುದ್ದೆಗಳು | | 2005-2006ನೇ ಸಾಲಿನಲ್ಲಿ ಯೋಜನೆಗೆ ಒದಗಿಸಿರುವ ಮೊತ್ತ ರೂ. ಲಕ್ಷಗಳಲ್ಲಿ |
|---|---|---|---|---|---|---|---|---|
| 4. | ಕಾರ್ಮಿಕ ಕಾನೂನುಗಳ ಸಮಾಚರಣೆ | ಸಂಖ್ಯೆ:ಕಾಇ 166 ಎಲ್‌ಇಟಿ 97 ದಿನಾಂಕ:24.6.99 | 2230-01-101-0-01 | ಕಾರ್ಮಿಕ ನಿರೀಕ್ಷಕರು | 26 | ಕಾರ್ಮಿಕ ನಿರೀಕ್ಷಕರು<br>1. ಕಾ.ನಿ (ಬಾಕಾ) ಬೆಂಗಳೂರು ನಗರ ಜಿಲ್ಲೆ.<br>2. (ಬಾಕಾ) ಬೆಂಗಳೂರು ನಗರ ಜಿಲ್ಲೆ.<br>3. (ಬಾಕಾ) ಬೆಂಗಳೂರು ಗ್ರಾಮಾಂತರ ಜಿಲ್ಲೆ<br>4. (ಬಾಕಾ) ಬೆಂಗಳೂರು ಗ್ರಾಮಾಂತರ ಜಿಲ್ಲೆ<br>5. (ಬಾಕಾ) ಮಂಗಳೂರು<br>6. (ಬಾಕಾ) ಮಂಗಳೂರು<br>7. (ಬಾಕಾ) ಬಳ್ಳಾರಿ<br>8. (ಬಾಕಾ) ಬಳ್ಳಾರಿ<br>9. (ಬಾಕಾ) ಮೈಸೂರು 1ನೇ ವೃತ್ತ<br>10. (ಬಾಕಾ) ಮೈಸೂರು 2ನೇ ವೃತ್ತ<br>11. (ಬಾಕಾ) ಕೋಲಾರ<br>12. (ಬಾಕಾ), ತುಮಕೂರು<br>13. (ಬಾಕಾ), ರಾಯಚೂರು<br>14. (ಬಾಕಾ), ಬೆಳಗಾಂ<br>15. (ಬಾಕಾ), ಬೆಳಗಾಂ<br>16. (ಬಾಕಾ) ಗುಲ್ಬರ್ಗಾ 1ನೇ ವೃತ್ತ<br>17. (ಬಾಕಾ) ಗುಲ್ಬರ್ಗಾ 2ನೇ ವೃತ್ತ<br>18. (ಬಾಕಾ) ಬಿಜಾಪುರ<br>19. ಚಿತ್ರದುರ್ಗ | 19 | 27.09 |
| 5 | " | ಸಂಖ್ಯೆ:ಕಾಇ 314 ಎಲ್‌ಇಟಿ 98 ದಿನಾಂಕ:18.9.1998 | " | 'ಡಿ' ಗ್ರೂಪ್ - ಜವಾನರು | 13 | 'ಡಿ' ಗ್ರೂಪ್ - ಜವಾನರು<br>1. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ-5, ಬೆಂ.,<br>2. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ-6, ಬೆಂಗಳೂರು.<br>3. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ-2, ಮಂಗಳೂರು | 9 | |

| ಕ್ರ. ಸಂ. | ಯೋಜನೆಯ ಹೆಸರು | ಯೋಜನೆಯನ್ನು ಮಂಜೂರು ಮಾಡಿದ ಸರ್ಕಾರಿ ಆದೇಶ ಸಂಖ್ಯೆ ಹಾಗೂ ದಿನಾಂಕ | 2005-2006ನೇ ಸಾಲಿನಲ್ಲಿ ವೆಚ್ಚವನ್ನು ಭರಿಸಬೇಕಾದ ಲೆಕ್ಕಶೀರ್ಷಿಕೆ | ಮೂಲತಃ ಮಂಜೂರಾದ ಹುದ್ದೆಗಳ ಸಂಖ್ಯೆ | | ಯೋಜನೆಯಡಿಯಲ್ಲಿ 2005-06ನೇ ಸಾಲಿನಲ್ಲಿ ಮುಂದುರರೆಸಬೇಕಾದ ಹುದ್ದೆಗಳು | | 2005-2006ನೇ ಸಾಲಿನಲ್ಲಿ ಯೋಜನೆಗೆ ಒದಗಿಸಿರುವ ಮೊತ್ತ ರೂ. ಲಕ್ಷಗಳಲ್ಲಿ |
|---|---|---|---|---|---|---|---|---|
| 5 | ” | ಸಂಖ್ಯೆ:ಕಾಇ 314 ಎಲ್‌ಇಟಿ 98 ದಿನಾಂಕ:18.9.1998 | ” | ‘ಡಿ’ ಗ್ರೂಪ್ - ಜವಾನರು | 13 | 4. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ-2, ಮಂಡ್ಯ<br>5. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ-2, ಬಿಜಾಪುರ<br>6. ಕಾರ್ಮಿಕ ಅಧಿಕಾರಿಗಳ ಕಛೇರಿ, ಹಾವೇರಿ<br>7. ಕಾರ್ಮಿಕ ಅಧಿಕಾರಿಗಳ ಕಛೇರಿ, ಬಾಗಲಕೋಟೆ<br>8. ಕಾರ್ಮಿಕ ಅಧಿಕಾರಿಗಳ ಕಛೇರಿ, ಚಾಮರಾಜನಗರ | 9 | 27.09 |
| 6 | ಕಾರ್ಮಿಕ ಕಾನೂನುಗಳ ಸಮಾಚರಣೆ | ಕಾಇ 7 ಎಲ್‌ಇಟಿ 98 20.3.99<br>ಕಾಇ 195 ಎಲ್‌ಇಟಿ 93 ದಿ.2.3.99 | 2230-01-101-0-01 | ವಾಹನ ಚಾಲಕರು | 5 | ವಾಹನ ಚಾಲಕರು<br>1. ಸಹಾಯಕ ಕಾರ್ಮಿಕ ಆಯುಕ್ತರ ಕಚೇರಿ, ಚಿಕ್ಕಮಗಳೂರು<br>2. ಕೇಂದ್ರ ಕಚೇರಿ | 2 | |
| 7 | ಕಾರ್ಮಿಕ ಕಾನೂನುಗಳ ಸಮಾಚರಣೆ | ಎಲ್ ಡಿ 106 ಆರ್ ಅಂಡ್ ಐ 2000, 19.6.2000 | 2230-01-101-0-01 | ಜ್ಯುನಿಯರ್ ಪ್ರೋಗ್ರಾಮರ್, ಕೇಂದ್ರ ಕಚೇರಿ | 1 | ಜ್ಯುನಿಯರ್ ಪ್ರೋಗ್ರಾಮರ್, ಕೇಂದ್ರ ಕಚೇರಿ | 1 | |
| 8 | ಕಾರ್ಮಿಕ ಕಾನೂನುಗಳ ಸಮಾಚರಣೆ | ಎಲ್ ಡಿ 106 ಆರ್ ಅಂಡ್ ಐ 2000, 19.6.2000 | 2230-01-101-0-01 | ಡಾಟಾ ಎಂಟ್ರಿ ಆಪರೇಟರ್ ಕೇಂದ್ರ ಕಚೇರಿ | 2 | ಡಾಟಾ ಎಂಟ್ರಿ ಆಪರೇಟರ್ ಕೇಂದ್ರ ಕಚೇರಿ | 2 | |
| | | | | | | **ಒಟ್ಟು ಹುದ್ದೆಗಳು** | **53** | |
| 9 | ಕಾರ್ಮಿಕ ಭವನದ ಭದ್ರತಾ ಸ್ವಚ್ಛತಾ ಸಿಬ್ಬಂದಿ ವೇತನ ಮತ್ತು ಆಧುನೀಕರಣ | 2005-06ನೇ ಸಾಲಿನ ಆಯವ್ಯಯ ಹಂಚಿಕೆ ದಸ್ತಾವೇಜು | 2230-01-101-0-01-051 ಸಾಮಾನ್ಯ ವೆಚ್ಚಗಳು | - | | 2005-06ನೇ ಸಾಲಿನಲ್ಲಿ ಸದರಿ ಶೀರ್ಷಿಕೆಯಡಿಯಲ್ಲಿ ಸಾಮಾನ್ಯ ವೆಚ್ಚಗಳಿಗಾಗಿ ರೂ. 5.00 ಲಕ್ಷಗಳು ಬಿಡುಗಡೆಯಾಗಿದ್ದು ಇದರಲ್ಲಿ ಕಾರ್ಮಿಕ ಭವನದ ಭದ್ರತಾ ಸ್ವಚ್ಛತಾ ಸಿಬ್ಬಂದಿ ವೇತನ ಹಾಗೂ ಯೋಜನೆಯಡಿಯಲ್ಲಿ ಕಛೇರಿ ವೆಚ್ಚಗಳು ಸೇರಿದಂತೆ ಹೆಚ್ಚುವರಿ ಆಯವ್ಯಯ ಕೋರಲಾಗಿದೆ. | | 5.00 |
| 10 | | | 041- ಪ್ರಯಾಣ ವೆಚ್ಚಗಳು | | | ಹಾಗೂ 53 ಹುದ್ದೆಗಳಿಗೆ ಪ್ರಯಾಣ ವೆಚ್ಚಕ್ಕಾಗಿ ರೂ. 3.00 ಲಕ್ಷಗಳು ಬಿಡುಗಡೆಯಾಗಿರುತ್ತದೆ. | | 3.00 |

**ಬಿ.ಎಂ. ಮಠಪತಿ**

ಪಿ.ಆರ್. 738

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ.

## FOREST, ENVIRONMENT & ECOLOGY SECRETARIAT

**Sub:** Karnataka Sustainable Forest Management and Biodiversity Conservation Project funded by the JBIC of Rs. 745.00 crores commencing from 2005-06 to 2012-2013- Administrative approval reg.

**Read:**
1. Chief Conservator of Forests (S.F.), Bangalore letter No: A1-SF-JBIC-IIF/13/2002-03, dated: 13-05-2002.
2. Proceedings of the State Level Coordination Committee Meeting dt: 26-05-2003.
3. Minutes of discussion between JBIC & KFD, MOEF on 05-11-2004.
4. GOI letter No: 1/10/2005/Japan-I, dt: 04-04-2005.
5. Letter No: A1/KSMB/AM/CR-7/2005-06, dt: 25-04-2005 from Principal Chief Conservator of Forests, Bangalore.

**Preamble:**

The Chief Conservator of Forests (S.F.) vide his letter dt: 13-05-2002 read at (1) above, has submitted a project concept paper on Sustainable Forest and Environment Project for Karnataka (Phase-II) under JBIC project to be implemented through out the State of Karnataka.

A forestry project entitled "Karnataka Sustainable Forest Management and Biodiversity Conservation Project" proposal was prepared for funding by the donor agencies under external financial assistance.

The project proposal was placed before the State Level Co-ordination Committee and the committee cleared the project with the following observations :-

> While discussing about the second project, the department furnished the revised proposal and the chairman desired to know about the various components of the project. The committee elaborately discussed the importance and essentialities of each model of activities and suggested for certain alterations concentrating more on the activities that might fetch more revenue to the state exchequer and introduction of activities through application of higher technology. It was suggested to increase the allocation for forest fire protection and roadside plantations (to Rs. 50.00 crores by reducing the allocation of Rs. 10.00 crores each from Urban forestry and Farm forestry). It was also suggested to take up Ayurvedic species under model 7. There is planting activity under watershed development programme also and the department should take all care to avoid duplication. Target area approach should be considered under the farm forestry. Additional posts should not be created and recruited under the project. All activities should be brought under e-governance.
>
> Subject to the above the committee cleared the total project with total cost of Rs. 997.21 crores.

The project proposal was approved by the Government of India and was posed before the JBIC. The JBIC team visited the State, conducted field inspections and held several rounds of discussions with the field officers and State Government Officers and after detailed discussion, the project was recast for an amount of Rs. 745.00 crore. The JBIC has agreed to fund Rs. 608.8094 crores and the balance amount of Rs. 136.1906 crore will have to be borne by the State Government. This State share of Rs. 136.1906 crores need not be exclusively granted, as this amount would be salary component on the existing staff to be borne under the project, whose services will be utilized for implementing this project for 8 years and this would also include cost on repairs, maintenance and office expenses. In other words the project will be implemented by the redeployment of the existing staff and no new posts will be created. The project envisages plantation and allied activities both in forest and non-forest land. The activities in forest land will be undertaken by the forest department and the village forest committees. The activities in non-forest land will be taken up by the Panchayat Raj Institutions.

The JBIC team held a lengthy discussion and a meeting with Ministry of Environment and Forests and Karnataka Forest Department on 05-11-2004, where minutes of the discussion have been signed by the representative of the State Government (Principal Secretary, FEE Department) subject to approval of Government. The Finance Department was consulted in the matter and Finance Department has agreed to the project subject to certain changes regarding expenditure.

In accordance with the opinion of the Finance Department, the expenditure schedule has been revised and the details of the expenditure componentwise have been workedout and it is proposed to implement the project for a period of 8 years from 2005-06 to 2012-2013 at a local cost of Rs. 608.8094 crores funded by the JBIC and supplemented by Rs. 136.1906 crores of the State Government.

The Government of India letter read at (4) above, stated that the JBIC has agreed to extend the loan for the said project. The rate of interest is 0.75%, the repayment period is 30 years after the grace period of 10 years. The disbursement period starts from the effective date of the loan agreement. As per the loan agreement package signed between Government of Japan and Government of India the revised local cost is Rs. 613.266 crores funded by the JBIC supplemented by Rs. 131.734 crores of the State Government. The final project at a cost of Rs. 745.00 crores for implementing Karnataka Sustainable Forest Management and Biodiversity Conservation Project funded by the JBIC commencing from 2005-06 to 2012-2013 for 8 years has been mutually agreed. Administrative approval to this project.is to be given. Hence the order.

**Government Order No: FEE 279 FAP 2003, Bangalore, dated: 23rd May 2005**

Administrative approval is accorded for implementation of Japan Bank for International Co-operation assisted **Karnataka Sustainable Forest Management and Biodiversity Conservation Project** in the entire State of Karnataka as indicated in Annexure-I with the details of the expenditure componentwise at a total cost of **Rs. 745.00 crores (Rupees Seven hundred Forty Five Crores).** Out of 745.00 crores, JBIC will give financial assistance to the tune of 613.266 crores supplemented by Rs. 131.734 crores of the State Government, over a period of 8 years commencing from **2005-06 to 2012-2013** subject to the following terms and conditions.

1. Approval of Specially Empowered Committee should be obtained every year for implementation of the scheme.
2. The project staff will be appointed through redeployment of existing staff and without creation of new posts. It should be ensured that there is no duplication of efforts or activities between this project and the already ongoing projects/schemes.
3. All activities should be brought under e-governance.
4. The activities in forest land will be undertaken by the forest department and the village forest committees. The activities in non-forest land will taken up by the Panchayat Raj Institutions.
5. Utilisation Certificate should be furnished.
6. Quarterly progress report should be submitted to the Government.
7. There is planting activity under watershed development programme also and the department should take all care to avoid duplication. Target area approach should be considered under the farm forestry.

This Order issues with the concurrence of Planning Department and Finance Department vide their letter No: PD 15 PFE 2002, dt: 3-6-2003 & Note No: FD 838 Exp-2/2004, dt: 26-11-2004 & State Level Co-ordination Committee meeting held on 26-05-2003.

By order and in the Name of the Governor of Karnataka,

**S.R. VATSALA**

Under Secretary to Government,

Forest, Environment & Ecology Dept.

**ANNEXURE-1**

**G.O. No: FEE 279 FAP 2003, DATED: 23rd May 2005**

1. Karnataka Sustainable Forest Management and Biodiversity Conservation Project funded by the JBIC of Rs. 745.00 crores commencing from 2005-06 to 2012-2013 for a period of 8 years.

2. The approved Project has a common concept, description and data sheets for operations. However, it has two sub-projects-one for Project "A'' areas and the other for Project "B'' areas. Project 'A' covers 14 districts viz; Belgaum, Chamarajanagar, Chickmaglaur, Dakshina Kannada, Davanagere, Dharwad, Gadag, Hassan, Haveri, Kodagu, Mysore, Shimoga, Udupi and Uttar Kannada. The Project 'B' is for the remaining 13 districts viz; Bagalkote, Bangalore (Rural), Bangalore (Urban), Bellary, Bidar, Bijapur, Chitradurga, Gulbarga, Kolar, Koppal, Mandya, Raichur and Tumkur which are part of the on-going JBIC Project.

3. Broadly the activities in Project 'A' are; Natural Regeneration, Assisted Natural Regeneration, Plantations of Timber Species, Plantations of Fuelwood & Small Timber Species, Protected Area management, NTFP plantations, Restoration of Mangroves, Farm forestry, Tree Based Farming, Soil and Water Conservation, Support to VFCs, Infrastructure Development etc. Most activities proposed in Project "B'' are similar to 'Project A' except that 'Project B' will not have plantations of hardwood timber species and Restoration of Mangroves. Project 'A' areas receive a mean annual rainfall of 1200 mm and

above and project 'B' areas receive less than 1200 mm rainfall. There is no proposal to relocate people from any Protected Area or from any forest area in the project.

4. The thrust areas of activities in the Project are; Ecological Security, Meeting People's need, People's Participation in Forest Management, biodiversity Conservation, Human Resource development, Income Generation Activities (IGA) for Poverty Alleviation, Basic Infrastructure Support for field work, Soil Conservation and Water Harvesting measures. Focus will also be on the practice of tree based farming as supporting activity to agriculture.

5. The project is approved for a period of 8 years from 2005-06 to 2012-13 with an outlay of Rs. 745.00 crores. The total outlay for Project 'A' is Rs. 492.70 crores and for Project 'B' is Rs. 252.30 crores. The State Government's contribution is Rs. 131.734 crores, which is 17.68% of the total project cost.

**Approved Project cost by outputs during the project Period (Rs. in Million)**

| Sl. No. | Outputs | Project "A" | | Project "B" | | Total | |
|---|---|---|---|---|---|---|---|
| | | Cost | Percent | Cost | Percent | Cost | Percent |
| 1 | Ecological restoration through natural & assisted regeneration | 1,038 | 21 | 424 | 17 | 1,462 | 20 |
| 2 | Productivity Models | 1,477 | 30 | 524 | 21 | 2,000 | 27 |
| 3 | Agroforestry and Farm Forestry | 175 | 4 | 174 | 7 | 349 | 5 |
| 4 | Protected Area Management and Biodiversity conservation | 117 | 2 | 25 | 1 | 143 | 2 |
| 5 | Participatroy Management to meet rural needs | 526 | 11 | 280 | 11 | 806 | 11 |
| 6 | Forestry planning, management systems, Research & Training | 335 | 7 | 230 | 9 | 564 | 8 |
| 7 | Development of policy reforms | 8 | 0 | 7 | 0 | 15 | 0 |
| 8 | Infrastructural requirement | 160 | 3 | 24 | 1 | 184 | 2 |
| 9 | Soil Conservation and Water harvesting measures | 422 | 9 | 168 | 7 | 590 | 8 |
| 10 | Salary | 571 | 12 | 571 | 23 | 1,142 | 15 |
| 11 | Repairs Maintenance and Office Expenses (RMOE) | 94 | 2 | 94 | 4 | 188 | 3 |
| 12 | Tax | 5 | 0 | 1 | 0 | 6 | 0 |
| | **Total** | **4,927** | **100** | **2,523** | **100** | **7,450** | **100** |

The I.R.R. for Project 'A+B' is percent and EIRR for Project 'A+B' is 11.40 percent.

6. Provision is made to take up afforestation both in Government and private lands under 8 technical models in Project A & B areas.

| **Project A** | | **Project B** | | **Total** | |
|---|---|---|---|---|---|
| **Government Land** | **Private Land** | **Government Land** | **Private Land** | **Government Land** | **Private Land** |
| 1,29,000 ha. | 42,500 ha. | 56,000 ha. | 42,500 ha. | 1,85,000ha. | 85,000 ha. |

It is envisaged to distribute 7.6 crore seedlings and 500 tons of seeds to the farmers in Project "A" and Project "B" areas under Farm Forestry component.

7. All the afforestation programmes will be carried out through participatory management on watershed basis by forming 1,200 new VFCs to achieve desired results under JFPM. It is also proposed to constitute 73 Eco-Development Committees in the identified protected areas for treatment in the project.

8. Provision is made to employ one JFPM coordinator at the state level, 5 lead NGOs and 60 JFPM facilitators in the project for maximum period of 5 years purely on contract basis in order to maximize the impact of IGA and to make JFPM more effective and efficient.

9. Formation of Self Help Groups under VFCs aiming at enhancing the household economy of the poor forest dependents, providing alternate sources of income through income generation activities and enhancing the participation of women and other weaker sections in VFC decision making.

10. Biodiversity Conservation and Habitat Improvement activities in Bandipur National Park, Sharavathi and Shettihalli Wildlife sanctuaries, Ranebennur Black Buck and Daroji Sloth Bear sanctuaries are approved in the project.

11. Both domestic as well as overseas trainings have been included for officers and staff of the department, NGO's SHGs and VFC members in the areas of JFPM, skill upgradation, Institution formation and sustenance, account keeping etc., in the area of Human Resource Development.

12. Provision is made to develop a State Forest Data Center at head quarters and 6 Divisional Data Centers in the state at Working Plan division head quarters to strengthen Geographic Information System (GIS) and Management Information System (MIS).

13. Construction of buildings and purchase of vehicles are kept at the minimum. However, provision is made to purchase Computers to move in the direction of e-governance by providing support to the staff to develop skills in Geographic Information System.

14. Adequate emphasis is laid on concurrent monitoring using GIS and also on concurrent field evaluation to optimise the performance of the organization towards better achievements.

**S.R. VATSALA**
P.R. 739 Under Secretary to Government,
Forest, Environment & Ecology Dept.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಂ. ಮಂಜುನಾಥ, ಪಿಸಿ 811, ಕೆ.ಆರ್.ಪುರಂ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿದ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/ ಆರ್-7/38/2001/ ದಿನಾಂಕ:11-01-2002.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮಿಷನರ್, (ಆಡಳಿತ ಮತ್ತು ಸಿಎಆರ್) ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:84/ಅಪೀಲು/2001-02. ದಿನಾಂಕ:18-05-2002, ಓಬಿ ಸಂಖ್ಯೆ: 430/2002.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25-10-2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/74/2002-03.ದಿನಾಂಕ:31-07-2003.

**ಪ್ರಸ್ತಾವನೆ:**

ಶ್ರೀ ಎಂ.ಮಂಜುನಾಥ್,ಪಿಸಿ 8117 ಕೆ.ಆರ್.ಪುರಂ ಪೊಲೀಸ್ ಠಾಣೆ ಬೆಂಗಳೂರು, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ಧ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡುವಳಿ) ನಿಯಮಾವಳಿ 1965ರ ನಿಯಮ 7 ರಡಿ ಕ್ರಮ ಜರುಗಿಸಲಾಗಿದೆ.

**ದೋಷಾರೋಪಣೆ:** ``ದಿನಾಂಕ:30-11-2001 ರಂದು ರಾತ್ರಿ ಕರ್ತವ್ಯದಲ್ಲಿದ್ದ ಕೆ.ಆರ್.ಪುರಂ ಠಾಣೆಯ ಪಿಸಿ 8117 ಮಂಜುನಾಥ ಆದ ನೀವು ವಿಶ್ವನಾಥ ಬಡಾವಣೆಯಲ್ಲಿದ್ದ 5 ಪಾಯಿಂಟ್ ಪುಸ್ತಕಗಳ ಪೈಕಿ ಒಂದು ಪಾಯಿಂಟ್ ಪುಸ್ತಕಕ್ಕೆ ಮಾತ್ರ ಸಹಿ ಹಾಕಿದ್ದು, ಇತರೇ ಪಾಯಿಂಟ್ ಪುಸ್ತಕಗಳಿಗೆ ಸಹಿಹಾಕದೇ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿಯನ್ನು ಪ್ರದರ್ಶಿಸಿರುತ್ತೀರಿ. ಇದರಿಂದ ದಿನಾಂಕ:30-11-01ರಂದು ರಾತ್ರಿ ಸದರಿ ವಿಶ್ವನಾಥ ಬಡಾವಣೆಯಲ್ಲಿ ಶ್ರೀಮತಿ ಲಕ್ಷ್ಮಿ ಎಂಬುವರ ಮನೆಯಲ್ಲಿ ಕಳ್ಳತನವಾಗಿದ್ದು, ನೀವು ಸರಿಯಾಗಿ ಕರ್ತವ್ಯವನ್ನು ನಿರ್ವಹಿಸಿದ್ದರೆ ಕಳ್ಳರು ಎಚ್ಚೆತ್ತುಕೊಂಡು ಕುರಿತು ಕಳ್ಳತನ ಮಾಡುವುದನ್ನು ತಪ್ಪಿಸಬಹುದಾಗಿತ್ತು.''

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರಿಗೆ ನೀಡಿದ ನೋಟೀಸಿಗೆ ಅವರು ನೀಡಿದ ಸಮಜಾಯಿಷಿಯನ್ನೊಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, (ಪೂರ್ವ ವಿಭಾಗ)ಬೆಂಗಳೂರು ಇವರು, ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:11:01:2002ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಗಳ ಕಾಲ ಮುಂದಿನ ವಾರ್ಷಿಕ ಬಡ್ತಿಗೆ ಧಕ್ಕೆ ಆಗದಂತೆ (Not Affecting) ತಡೆಹಿಡಿದು, ದಿನಾಂಕ:06-12-2001 ರಿಂದ 31-12-2001 ರ ವರೆಗಿನ ಅವಧಿಯನ್ನು ಅಮಾನತ್ತಿನ ಅವಧಿಯೆಂದು ಪರಿಗಣಿಸಿ, ಜೀವನಾಧಾರ ಭತ್ಯೆಕ್ಕೆ ಸರಿದೂಗಿಸಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ನಂತರ ಮೇಲ್ಮನವಿಯಲ್ಲಿ ಅವರ ಮೇಲಿನ ಆರೋಪಗಳನ್ನು ಅಲ್ಲಗಳೆಯಲು ಯಾವುದೇ ಪುಷ್ಟಿಕರವಾದ ಅಂಶವನ್ನು ಮಂಡಿಸಿಲ್ಲವೆಂದು ಮನಗಂಡು ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಎತ್ತಿ ಹಿಡಿದು, ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ(2) ರಲ್ಲಿ ಓದಲಾದ ದಿನಾಂಕ:18-05-2002ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿದ್ದು, ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಕಂಡಿಕಾವಾರು ಷರಾಗಳನ್ನು ಪರಿಶೀಲಿಸಿದ ನಂತರ,ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿದ್ದು, ತಮ್ಮ ಬೀಟ್ ಕರ್ತವ್ಯವನ್ನು ಸರಿಯಾಗಿ ಪಾಲಿಸದೆ, ಕರ್ತವ್ಯ ಲೋಪವೆಸಗಿರುವುದು, ಶ್ರೀಮತಿ ಲಕ್ಷ್ಮಿ ಎಂಬುವವರ ಮನೆಯಲ್ಲಿ ಕಳ್ಳತನ ಆಗಿರುವುದು ಸಾಕ್ಷಿ ಆಗಿದೆ. ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರಿ ಲಘು ದಂಡನೆ ವಿಧಿಸಿದ್ದು, ಸರ್ಕಾರ ಇದರಲ್ಲಿ ಹಸ್ತಕ್ಷೇಪ ಮಾಡಲು ಸಕಾರಣಗಳು ಇರುವುದಿಲ್ಲವೆಂದು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 263 ಪೊಸಿಅ 2002 ಬೆಂಗಳೂರು, ದಿನಾಂಕ: 12ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್(ಶಿಸ್ತು ನಡವಳಿ) ನಿಯಮಾವಳಿ 1965 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ಮಂಜುನಾಥ್,ಪಿಸಿ,8117, ಕೆ.ಆರ್.ಪುರಂ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸರ್ಕಾರವು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 740

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ENERGY SECRETARIAT

**Sub:** Transfer of 2.5 M.W. Wind Power Capacity in favour of M/s Vandana Ispat Limited - Orders relating to:

**Read:**
1. Government order No: DE 26 NCE 1999 dated: 13.5.1999.
2. Government order No: EN 170 NCE 2002 dated: 12.8.2002.
3. Government order No: DE 280 NCE 2004 dated: 17.8.2004.
4. Letter No. KRED/08/VIL/2005/847 dated 06.5.2005 received from the MD, KREDL, Bangalore.

**Preamble:-**

In the Government Order dated 17.8.2004 read at (3) above, sanction has been accorded for implementation of 12.50 M.W. capacity Wind Power Project at Kurumardikere in Madakaripura Wind Zone, Chitradurga, District to M/s Kurumardikere Energy Ltd.

Now, the Managing Director, Karnataka Renewable Energy Development Limited, Bangalore in his letter dated 6.5.2005 read at (4) above, has recommended to the Government for transfer of 2.5 M.W. Wind Power capacity in favour of M/s Vandana Ispat Limited, at Kurumardikere in Madakaripura Wind Zone, Chitradurga District from out of the sanctioned 12.50 M.W. capacity of M/s Kurumardikere Energy Ltd. The proposal has been examined and pass the following order:

**Government Order No. EN 130 NCE 2005, Bangalore, Dated: 12th May 2005**

Government are pleased to accord sanction for transfer of 2.5 M.W. Wind Power capacity to M/s Vandana Ispat Limited, at Kurumardikere in Madakaripura Wind Zone, Chitradurga District from out of the sanctioned 12.50 M.W. capacity to M/s Kurumardikere Energy Ltd.

The terms and conditions of the Government Order read at (1) above, shall **IPSO FACTO** applicable.

By Order and in the name of the Governor of Karnataka,

**SURESH .B. KRISHNAPPANAVAR**

P.R. 741

Under Secretary to Government,
Energy Department.

## PERSONNEL AND ADMINISTRATIVE REFORMS SECRETARIAT

**CORRIGENDUM No. DPAR 1 SMR 2004, Bangalore, Dated: 21st May 2005**

In Notification No. DPAR 1 SMR 2004 dated 27.11.2004 for the words "Bharath Cancer Therapy Institute, Mysore" appearing in Sl.No.84 under item I the words "Bharath Hospital and Institute of Oncology, Hebbal, Mysore" shall be substituted.

By Order and in the name of the Governor of Karnataka,

**K. RAGHURAM BHANDARY**

P.R. 742

Under Secretary to Government-2,
Department of Personnel and Administrative Reforms (Service Rules).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಸಿ.ಪಿ. ಪಾಟೀಲ್, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರ ಮೇಲೆ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಉಪ ಲೋಕಾಯುಕ್ತರಿಗೆ ವಹಿಸಿರುವುದನ್ನು ರದ್ದುಗೊಳಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರ ಅ.ಸ.ಪ. ಸಂ. ಸಿಓಎಂಪಿಟಿ:ಉಪಲೋಕ್:ಜಿಎಲ್‌ಬಿ:251:2003: ಎಆರ್‌ಎಲ್‌ಓ:04, ದಿ:19.2.2004.
2. ಆದೇಶ ಸಂ. ಗ್ರಾಅಪ:20:ಇಎನ್‌ಕ್ಯೂ:04, ದಿ:25.5.04.

**ಪ್ರಸ್ತಾವನೆ:**

ಶ್ರೀ ಸಿ.ಪಿ. ಪಾಟೀಲ್, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರು 2001-02ನೇ ಸಾಲಿನಲ್ಲಿ ಶಾಸಕರ ಅನುದಾನದಲ್ಲಿ ತಳಕಲ್ ಗ್ರಾಮದಲ್ಲಿ ಸರ್ಕಾರಿ ವೆಚ್ಚದಲ್ಲಿ ಸಮುದಾಯ ಭವನವನ್ನು ಖಾಸಗಿ ಜಮೀನಿನಲ್ಲಿ ಕಟ್ಟಿಸಿದ್ದಾರೆಂದು ಶ್ರೀ ಬಸವಲಿಂಗಪ್ಪರಾಯರೆಡ್ಡಿ ಎಂಬುವರು ದಿ.22.2.03 ರಂದು ಕರ್ನಾಟಕ ಲೋಕಾಯುಕ್ತಕ್ಕೆ ನೀಡಿದ ದೂರಿನ ಹಿನ್ನೆಲೆಯಲ್ಲಿ, ಕರ್ನಾಟಕ ಉಪ ಲೋಕಾಯುಕ್ತ ಇವರು, ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರಂತೆ ತನಿಖೆ ನಡೆಸಿ, ಸದರಿ ಕಾಯ್ದೆಯ ಕಲಂ 12 (3) ರನ್ವಯ ನೀಡಿದ್ದ ವರದಿಯನ್ನು ನಿಬಂಧಕರು, ಕರ್ನಾಟಕ ಲೋಕಾಯುಕ್ತರು ಮೇಲೆ ಓದಲಾದ ಕ್ರಮ ಸಂ.(1)ರಲ್ಲಿ ಸರ್ಕಾರಕ್ಕೆ ಸಲ್ಲಿಸಿದ್ದರ ಮೇರೆಗೆ, ಸರ್ಕಾರವು ಸದರಿ ವರದಿಯಂತೆ ಶ್ರೀ ಸಿ.ಪಿ. ಪಾಟೀಲ್, ಅಂದಿನ ಕಾರ್ಯಪಾಲಕ ಇಂಜಿನಿಯರ್ ಇವರ ಮೇಲಿನ ಆರೋಪಗಳ ಬಗ್ಗೆ ಕನಾಸೇ (ವನಿಮೇ) ನಿಯಮಾವಳಿ 1957ರ ನಿಯಮ 11ನೇ ನಿಯಮದ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಅದೇ ನಿಯಮದ ನಿಯಮ 14-ಎ ರಂತೆ ಪ್ರಕರಣವನ್ನು ಮೇಲೆ ಓದಲಾದ ಕ್ರಮ ಸಂ.(2)ರ ಆದೇಶದಲ್ಲಿ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿತ್ತು.

ಶ್ರೀ ಸಿ.ಪಿ. ಪಾಟೀಲ್, ಅಂದಿನ ಕಾರ್ಯಪಾಲಕ ಇಂಜಿನಿಯರಿಂಗ್, ಇವರು, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಿಸಿದ್ದ ಅರ್ಜಿ ಸಂ. 699/2004 ನ್ನು ನ್ಯಾಯ ಮಂಡಳಿಯ ದಿ. 16.6.2004 ರಲ್ಲಿ ತೀರ್ಪಿನಲ್ಲಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಮತ್ತು ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರುಗಳು ಸದರಿ ಅಧಿಕಾರಿಯಿಂದ ರೂ. 50,000-00 ಗಳನ್ನು ವಸೂಲ್ಮಾಡಲು ಅವರಿಗೆ ನೀಡಿದ್ದ ನೋಟೀಸ್‌ಗಳನ್ನು ರದ್ದುಗೊಳಿಸಿ, ಲೋಕಾಯುಕ್ತರು ಈ ವಿಚಾರಣೆಯನ್ನು ಮುಂದುವರೆಸಿ ವರದಿ ಸಲ್ಲಿಸಲು ತೀರ್ಪು ನೀಡಿತ್ತು. ನಂತರ, ಶ್ರೀ ಸಿ.ಪಿ. ಪಾಟೀಲ್, ಅಂದಿನ ಕಾರ್ಯಪಾಲಕ ಇಂಜಿನಿಯರ್, ಇವರು ದಿ: 1.3.2005 ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ, ಸಮುದಾಯ ಭವನ ನಿರ್ಮಾಣ ಕಾಮಗಾರಿಯಲ್ಲಿ ಸರ್ಕಾರಿ ಹಣದ ದುರ್ಬಳಕೆಯಲ್ಲಿ ಅಥವಾ ಹಣ ದುರುಪಯೋಗವಾಗಿಲ್ಲ, ಭೂ ಮಾಲೀಕರು ಸಹ ಈ ಸಮುದಾಯ ಭವನ ನಿರ್ಮಾಣಕ್ಕೆ ಈ ಜಮೀನನ್ನು ಬಿಟ್ಟುಕೊಟ್ಟಿರುವುದಾಗಿ ಈ ಅಂಶವನ್ನು ತಹಶೀಲ್ದಾರರು ಜಿಲ್ಲಾಧಿಕಾರಿಯವರಿಗೆ ನೀಡಿರುವ ಮಾಹಿತಿ ಹಾಗೂ ಜಿಲ್ಲಾಧಿಕಾರಿಗಳು, ಲೋಕಾಯುಕ್ತಕ್ಕೆ ಬರೆದಿರುವ ಪತ್ರಗಳಿಂದ ತಿಳಿದು ಬರುತ್ತದೆಂದೂ ಮತ್ತು ಈ ಜಮೀನನ್ನು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲಾಗಿದೆ ಎಂದು ಹೇಳಿದ್ದರೂ ಸಹ ಯಲಬುರ್ಗಾ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿಯವರು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕಾಗಿ ಭೂಸ್ವಾಧೀನ ಕಾಯ್ದೆಯಡಿ ಗ್ರಾಮ ಪಂಚಾಯತ್‌ನಿಂದ ಯಾವುದೇ ಪ್ರಸ್ತಾವನೆ ಸಹಾಯಕ ಆಯುಕ್ತರಿಗೆ ಸಲ್ಲಿಸಲ್ಪಟ್ಟಿಲ್ಲವೆಂದು ವರದಿ ನೀಡಿರುವ ಮಾಹಿತಿ ಒದಗಿಸುತ್ತಾ, ಈ ಬಗ್ಗೆ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಯಲಬುರ್ಗಾ ಗ್ರಾಮ ಪಂಚಾಯತಿಯು, ಜಿಲ್ಲಾಧಿಕಾರಿಗಳು ದಿ: 3.4.2002 ರಂದು ಈ ಸಮುದಾಯ ಭವನ ನಿರ್ಮಾಣಕ್ಕೆ ಹಣ ಬಿಡುಗಡೆ ಮಾಡಿದ್ದ ಆದೇಶವನ್ನು ರದ್ದುಗೊಳಿಸಲು ಹೂಡಿದ್ದ ರಿಟ್ ಅರ್ಜಿ ಸಂ. 42636/02 ಸಹ ವಜಾಗೊಂಡಿರುವುದರಿಂದ ಮತ್ತು ಶ್ರೀ ಬಸವಲಿಂಗಪ್ಪರಾಯರೆಡ್ಡಿ ಇವರು ಈ ಜಮೀನಿನಲ್ಲಿ ಪ್ರಾಥಮಿಕ ಆರೋಗ್ಯ ನಿರ್ಮಿಸಲು ಭೂ ಸ್ವಾಧೀನ ಮಾಡಿಕೊಳ್ಳಲಾಗಿತ್ತೆಂದು ಆದರೆ, ಸದರಿ ಜಮೀನಿನಲ್ಲಿ ಗುಡಿ ಕಟ್ಟಡ ಕಟ್ಟಬಾರದೆಂದು ಯಲಬುರ್ಗಾ ಸಿವಿಲ್ ಕೋರ್ಟ್‌ನಲ್ಲಿ ಸಾರ್ವಜನಿಕ ಹಿತಾಸಕ್ತಿಯ ದಾವೆ ಹೂಡಿದ್ದು, ಆ ಬಗ್ಗೆ ಯಾವುದೇ ಆದೇಶ ನೀಡಿಲ್ಲದಿರುವುದು ಹಾಗೂ ಶ್ರೀ ಮಲ್ಲನಗೌಡ ಇವರು ಸ್ವಇಚ್ಛೆಯಿಂದ ಈ ಜಮೀನನ್ನು ಮೈಲಾರಲಿಂಗೇಶ್ವರ ಸಮುದಾಯ ಭವನಕ್ಕೆ ಬಿಟ್ಟುಕೊಟ್ಟಿರುತ್ತಾರೆಂದೂ ನೀಡಿರುವ ದಾಖಲೆಗಳ ಪ್ರತಿಗಳನ್ನು ಒದಗಿಸುತ್ತಾ, ತಮ್ಮ ಮೇಲಿನ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿದ್ದಾರೆ.

ಈ ಪ್ರಕರಣದಲ್ಲಿ ಇವರು ನೀಡಿರುವ ದಾಖಲೆಗಳ ಪ್ರಕಾರ ಪ್ರಶ್ನಿತ ಜಮೀನು ಧಾರ್ಮಿಕ ದತ್ತಿ ಇಲಾಖೆಗೆ ಸಮುದಾಯ ಭವನ ನಿರ್ಮಾಣಕ್ಕಾಗಿ ನೀಡಲ್ಪಟ್ಟಿರುವುದು ಯಲಬುರ್ಗಾ ತಹಶೀಲ್ದಾರ್‌ಗೆ ಕಛೇರಿಯು ನೀಡಿದ Record of Rights ಗೇಣಿ ಪಹಣಿ ಪತ್ರಿಕೆ (ಆರ್.ಟಿ.ಸಿ.) ಯಿಂದ ತಿಳಿದು ಬರುತ್ತದೆ. ಮತ್ತು ಸದರಿ ಜಮೀನಿನಲ್ಲಿ ಈಗಾಗಲೇ ಸಮುದಾಯ ಭವನ ಕಟ್ಟಡ ಕಟ್ಟಲಾಗಿದೆ ಎಂದು ಸದರಿ ತಹಶೀಲ್ದಾರರ ದಿ: 7.2.05ರ ದೃಢೀಕೃತ ಪತ್ರದಿಂದ ತಿಳಿದು ಬರುತ್ತದೆ. ಅಂದರೆ, ಭೂಮಿಯ ಟೈಟಲ್ ಈಗ ಸರ್ಕಾರದ ಧಾರ್ಮಿಕದತ್ತಿ ಇಲಾಖೆಗೆ ಇರುವುದು, ಬಿಡುಗಡೆಯಾದ ಹಣವನ್ನು ಅದೇ ಉದ್ದೇಶಕ್ಕೆ ಖರ್ಚು ಮಾಡಿರುವುದು ಕಂಡುಬರುವುದರಿಂದ, ಇವರ ಮೇಲೆ ಈಗ ವಿಚಾರಣೆಗೆ ಒಳಪಡಿಸಬೇಕಾದ ಅಂಶಗಳಿಲ್ಲದಿರುವುದರಿಂದ ಹಾಗೂ ಇವರ ಮೇಲಿನ ಆಪಾದನೆಗಳನ್ನು ರುಜುವಾತುಪಡಿಸಲು ಸಾಧ್ಯವಾಗದಿರುವ ಹಿನ್ನೆಲೆಯಲ್ಲಿ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಮುಂದುವರಿಸಿದರೂ ಪ್ರಯೋಜನವಿಲ್ಲವೆಂದು ಸರ್ಕಾರವು ನಿರ್ಧರಿಸಿ, ಕರ್ನಾಟಕ ಉಪ ಲೋಕಾಯುಕ್ತಕ್ಕೆ ಈ ಬಗ್ಗೆ ವಿಚಾರಣೆಗೆ ವಹಿಸಿರುವ ದಿ: 25.5.2004ರ ಆದೇಶ ಸಂಖ್ಯೆ:ಗ್ರಾಅಪ:20:ಇಎನ್‌ಕ್ಯೂ:04 ನ್ನು ರದ್ದುಗೊಳಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 20 ಇಎನ್‌ಕ್ಯೂ 04, ಬೆಂಗಳೂರು, ದಿನಾಂಕ: 9ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಸಿ.ಪಿ. ಪಾಟೀಲ್, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರ ಮೇಲಿನ ಆರೋಪಗಳ ಬಗ್ಗೆ ಕನಾಸೇ (ವನಿಮೇ) ನಿಯಮಾವಳಿ 1957ರ ನಿಯಮ 11ನೇ ನಿಯಮದ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಅದೇ ನಿಯಮದ ನಿಯಮ 14-ಎ ರಂತೆ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿದ್ದ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಸ್.ಸಿ. ಸುಂದರ
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 743

## LABOUR SECRETARIAT

**Sub:** Constitution of Institute Management Committee Inrespect of Govt. ITI, Mysore.

**Read:** 1. D.O.Letter No.DGE&T-35(4)(2)/2004-PCT/CPIU, Dated:11.2.2005 from the Govt. of India, Ministry of Labour & Employment New Delhi.

2. Letter No.DET/TRG/T-1/CR-2/2005-06, dated:5.5.2005 from the Director, Employment & Training, Bangalore.

**Preamble:-**

In D.O. letter read at (1) above, the Govt. of India has requested to constitute an Institute of Management Committee inrespect of upgraded I.T.I.s

The Director, Employment & Training has sent proposal for Constitution of Institute Management Committee inrespect of Govt.I.T.I., Mysore,

The proposal has been examined.

**Government Order No. LD 142 ETI 2005(3), Bangalore, Dated: 18th May 2005**

The Institute Management Committee inrespect of Govt. I.T.I., Mysore is constituted consisting the following members.

| | | |
|---|---|---|
| 1. | Sri D. Ganguly, Vice President-Works, J.K. Industries Ltd., K.R.R. Road, Mysore. | Chairman |
| 2. | Representative from TVS, Nanjangud, Mysore | Member |
| 3. | Representative from Bharath Earth Movers Ltd., Mysore. | Member |
| 4. | Representative from Automotive Axel Ltd., Mysore. | Member |
| 5. | Representative from M/s Rane (Madras) Ltd., Mysore. | Member |
| 6. | Joint Director, Divisional Office, Mysore. | Member |
| 7. | Dist.Employment Officer, Mysore. | Member |
| 8. | Training Officer (Sr) of the ITI, Mysore. | Member |
| 9. | Student Representative of the ITI, Mysore. | Member |
| 10. | Joint Director, Industries & Commerce, Urban Dist., Mysore. | Member |
| 11. | Principal, Govt ITI, Mysore. | Convenor |

The term of the Committee will be for a period of 2 years and the Committee meets once in 2 months.

**The roles and responsibilities of IMC is as under:**

a) Generation revenue through various means such as projects from industry and to use these funds as decided by them

b) Forescast of new emerging training areas

c) Development of curriculum

d) Selection of trainees

e) Training of trainers

f) Appointment of Contract faculty/Guest faculty

g) On the job training

h) Testing and certification

i) Placement of trainees passing out.

By Order and in the name of the Governor of Karnataka,

P.R. 744

**G.N. LAKSHMIPATHY**

Deputy Secretary to Government, Labour Department.

## ಕಾರ್ಮಿಕ ಸಚಿವಾಲಯ

**ವಿಷಯ:** ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದಲ್ಲಿನ ಹೆಚ್ಚುವರಿ ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ರಾಜ್ಯ ಆಡಳಿತ ಸುಧಾರಣೆ ಆಯೋಗದ ಡಿಸೆಂಬರ್ 2002ರ ವರದಿ.

2. ಉದ್ಯೋಗ ಮತ್ತು ತರಬೇತಿ ಇಲಾಖೆ ಪತ್ರ ಸಂಖ್ಯೆ:ಉತನಿ/ಉದ್ಯೋಗ/ಸಾಸಂವಿ-16/ವಿವ-693/2001-02, ದಿನಾಂಕ: 27.4.2005ರವರೆವಿಗೂ ನಡೆಸಿದ ಪತ್ರ ವ್ಯವಹಾರ.

3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಎಸ್ ಡಿ ಇ 2003, ದಿನಾಂಕ: 1.9.2003, 17.5.2004, 21.6.2004.

4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 38 ಆರ್‌ಡಿಸಿ 2004, ದಿನಾಂಕ: 6.8.2004.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಾಜ್ಯ ಆಡಳಿತ ಸುಧಾರಣಾ ಆಯೋಗ ಡಿಸೆಂಬರ್ 2002ರಲ್ಲಿ ಒಪ್ಪಿಸಿದ ವರದಿಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗಕ್ಕೆ ಸಂಬಂಧಿಸಿದಂತೆ ಕೆಲವೊಂದು ಶಿಫಾರಸ್ಸುಗಳನ್ನು ಮಾಡಿರುತ್ತದೆ. 13.11 ರಿಂದ 13.18 ರವರೆಗಿನ ಶಿಫಾರಸ್ಸುಗಳು ಇಲಾಖೆಯ ಉದ್ಯೋಗ ವಿಭಾಗವನ್ನು ಪುನರ್ ವಿನ್ಯಾಸಗೊಳಿಸುವುದಕ್ಕೆ ಸಂಬಂಧಿಸಿದ ಮತ್ತು ನಿರ್ದೇಶನಾಲಯದ ರಾಜ್ಯ ಉದ್ಯೋಗ ವಿನಿಮಯ

ಕಛೇರಿ ಹೊರತುಪಡಿಸಿ ಉದ್ಯೋಗ ವಿನಿಮಯ ಕಛೇರಿಯ ಘಟಕ ಕಛೇರಿಗಳನ್ನು ರದ್ದುಪಡಿಸಬೇಕೆಂದು ಅದರಲ್ಲಿ ಶಿಫಾರಸ್ಸು ಮಾಡಲಾಗಿರುತ್ತದೆ. ಉದ್ಯೋಗ ವಿಭಾಗದ ಕಾರ್ಯ ನಿರ್ವಹಣೆ ಪರಿಶೀಲಿಸಿದ ಆಡಳಿತ ಸುಧಾರಣೆ ಇಲಾಖೆ ಈ ತೀರ್ಮಾನಕ್ಕೆ ಬಂದಿರುತ್ತದೆ. ಅಲ್ಲದೆ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ನಂತರ ಉದ್ಯೋಗಿಗಳ ಪಟ್ಟಿಯನ್ನು ಉದ್ಯೋಗ ವಿನಿಮಯ ಕಛೇರಿಯಿಂದ ನೇಮಕಾತಿಗಾಗಿ ಪಡೆಯುವುದು ಕಡ್ಡಾಯವಲ್ಲವೆಂದು ಅದು ಅಭಿಪ್ರಾಯಪಟ್ಟಿದ್ದರಿಂದಾಗಿ ವಿನಿಮಯ ಕಛೇರಿಯ ಉಪಯುಕ್ತತೆ ಕಿರಿದಾಗಿರುತ್ತದೆ ಹಾಗೂ ಈ ವಿನಿಮಯ ಕಛೇರಿಯ ಪ್ರಾಯೋಜಕತ್ವ ಅತ್ಯಂತ ಕನಿಷ್ಠವಾಗಿದ್ದು ಮತ್ತು ಅವರು ನೀಡುವ ಉದ್ಯೋಗಾವಕಾಶಗಳ ಮಾಹಿತಿಗೆ ಅಷ್ಟೊಂದು ದೊಡ್ಡ ಸಿಬ್ಬಂದಿ ವರ್ಗವಿರುವುದು ಸಮರ್ಥನಿಯವಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟಿದೆ.

ಸದರಿ ಪ್ರಸ್ತಾವನೆಯನ್ನು ಅಪರ ಕಾರ್ಯದರ್ಶಿಯವರ ನೇತೃತ್ವದ ಅಧಿಕಾರಿ ಸಮಿತಿಯು, ಆಡಳಿತ ಸುಧಾರಣಾ ಆಯೋಗ, ಉದ್ಯೋಗ ವಿಭಾಗದ ಬಗ್ಗೆ ಮಾಡಿದ ಶಿಫಾರಸ್ಸುಗಳನ್ನು ಸವಿಸ್ತಾರವಾಗಿ ಚರ್ಚಿಸಿ ಆಡಳಿತ ಸುಧಾರಣಾ ಆಯೋಗದ ಅಭಿಪ್ರಾಯವನ್ನು ಒಪ್ಪಿ ಉದ್ಯೋಗ ವಿನಿಮಯ ಕೇಂದ್ರದ ಘಟಕವನ್ನು ರದ್ದುಪಡಿಸಲು ಮತ್ತು ಅಂಕಿ ಅಂಶಗಳ ಮಾಹಿತಿ ಸಂಗ್ರಹಣೆಗಾಗಿ ಮಾತ್ರ ಸಣ್ಣದೊಂದು ಉದ್ಯೋಗ ವಿಭಾಗವನ್ನು ಉಳಿಸಿಕೊಳ್ಳಲು ತೀರ್ಮಾನಿಸಿದೆ.

ಮೇಲೆ ಓದಲಾದ (2)ರ ಉದ್ಯೋಗ ಮತ್ತು ತರಬೇತಿ ಇಲಾಖೆ ದಿನಾಂಕ: 27.4.2005ರ ಪತ್ರದಲ್ಲಿ ಉದ್ಯೋಗ ವಿನಿಮಯ ಕೇಂದ್ರಗಳು ಜಿಲ್ಲಾ ಮಟ್ಟದಲ್ಲಿ ಉದ್ಯೋಗಾರ್ಥಿಗಳ ವೃತ್ತಿ ಸಂಬಂಧಪಟ್ಟ ಸಮಸ್ಯೆಗಳಿಗೆ ಸ್ಪಂದಿಸುವ ಏಕೈಕ ಸಂಸ್ಥೆಗಳಾಗಿದ್ದು ಅವುಗಳನ್ನು ಈ ಹಂತದಲ್ಲಿ ಮುಚ್ಚುವುದು ಸಮಂಜಸವಲ್ಲವೆಂದು ಅಭಿಪ್ರಾಯಪಟ್ಟು (1) ವೃತ್ತಿ ಮಾರ್ಗದರ್ಶನ (2) ಉದ್ಯೋಗ ಮಾರುಕಟ್ಟೆ ಮಾಹಿತಿ. ಈ ಎರಡು ಮುಖ್ಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತವೆಯಲ್ಲದೆ ಕೇಂದ್ರ ಸರ್ಕಾರದ ಅಧಿನಿಯಮವೊಂದನ್ನು ಸಹ ಜಾರಿಗೊಳಿಸುತ್ತಿರುವುದರಿಂದ ಅವುಗಳನ್ನು ಮುಂದುವರೆಸುವುದು ಅವಶ್ಯವೆಂದು ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಪ್ರಸ್ತುತ ಅಧಿಸೂಚನೆಯಾಗುತ್ತಿರುವ ಹುದ್ದೆಗಳ ಸಂಖ್ಯೆಯಲ್ಲಿ ಗಣನೀಯ ಪ್ರಮಾಣದಲ್ಲಿ ಇಳಿಮುಖಗೊಂಡಿರುವುದರ ಹಿನ್ನೆಲೆಯಲ್ಲಿ ಆಡಳಿತ ಸುಧಾರಣೆ ಆಯೋಗದ ಶಿಫಾರಸ್ಸಿನಂತೆ ರಾಜ್ಯ ಮಟ್ಟದಲ್ಲಿ ಉದ್ಯೋಗ ಬ್ಯೂರೊ ಒಂದನ್ನು ಸ್ಥಾಪಿಸುವುದಲ್ಲದೆ ಜಿಲ್ಲಾ ಮಟ್ಟದಲ್ಲಿ ಅವುಗಳನ್ನು ಕನಿಷ್ಠ ಪ್ರಮಾಣದ ಸಿಬ್ಬಂದಿಯೊಡನೆ ಮುಂದುವರಿಸುವುದು ಸೂಕ್ತವೆಂದು ಭಾವಿಸಿ ಉದ್ಯೋಗ ವಿಭಾಗಕ್ಕೆ ಪ್ರಸ್ತುತ ಮಂಜೂರಾಗಿರುವ 417 ಹುದ್ದೆಗಳ ಪೈಕಿ 250 ಹುದ್ದೆಗಳನ್ನು ಮಾತ್ರ ಮುಂದುವರೆಸಿ ಉಳಿದ 167 ಹುದ್ದೆಗಳನ್ನು ಹೆಚ್ಚುವರಿಯೆಂದು ಪರಿಗಣಿಸಲು ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಹೆಚ್ಚುವರಿ ಸಿಬ್ಬಂದಿಯ ಪುನರ್ ವ್ಯವಸ್ಥೆಗೆ ಸಂಬಂಧಿಸಿದಂತೆ ಮೊದಲನೆಯದಾಗಿ ಉದ್ಯೋಗ ವಿನಿಮಯ (ಹುದ್ದೆಗಳ ಕಡ್ಡಾಯ ಪ್ರಕಟಣೆ) ಅಧಿನಿಯಮ 1959 ರನ್ವಯ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರಗಳು ಪ್ರಮುಖ ಕೆಲಸವಾದಂತಹ ವೃತ್ತಿ ಮಾರ್ಗದರ್ಶನ ಮತ್ತು ಉದ್ಯೋಗ ಮಾರುಕಟ್ಟೆ ವಿಶ್ಲೇಷಣೆಗಳನ್ನು ನಿರ್ವಹಿಸುತ್ತಿರುವುದರಿಂದ ಅದನ್ನು ರದ್ದುಪಡಿಸದೆ ಅತ್ಯಂತ ಕನಿಷ್ಠ ಸಿಬ್ಬಂದಿಯೊಂದಿಗೆ ಮುಂದುವರೆಸುವುದು ಹಾಗೂ ಎರಡನೆಯದಾಗಿ ಸಂಬಂಧಪಟ್ಟ ವಿಶ್ವವಿದ್ಯಾನಿಲಯಗಳು ಧನ ಸಹಾಯ ಮಾಡುತ್ತಿರುವುದರಿಂದ ವಿಶ್ವವಿದ್ಯಾನಿಲಯಗಳಲ್ಲಿರುವ 6 ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕಛೇರಿಗಳನ್ನು ಸಹ ಕಡಿಮೆ ಸಿಬ್ಬಂದಿಯೊಂದಿಗೆ ಉಳಿಸಿಕೊಳ್ಳಬಹುದಾಗಿದೆ ಎಂದು ನಿರ್ಧರಿಸಿದೆ.

ಉಲ್ಲೇಖ (3)ರ ಆದೇಶಾನುಸಾರ ಹೆಚ್ಚುವರಿ ಹುದ್ದೆಗಳಲ್ಲಿನ ಅಧಿಕಾರಿ/ನೌಕರರ ಸ್ವಯಂ ನಿವೃತ್ತಿಗೆ ಅನುಮತಿ ನೀಡುವ ಬಗ್ಗೆ ಪ್ರತ್ಯೇಕವಾಗಿ ಪರಿಶೀಲಿಸಲಾಗುತ್ತಿದೆ.

ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಅಧಿಕಾರಿ/ನೌಕರರ ಸೇವೆಯನ್ನು ಮುಂದಿನ ಸ್ಥಳ ನಿಯುಕ್ತಿಗಾಗಿ ಸಿಆಸು ಇಲಾಖೆಯ ಮರು ನಿಯೋಜನೆ ಕೋಶಕ್ಕೆ ನೀಡಬೇಕೆಂದು ನಿರ್ಧರಿಸಿದ್ದನ್ನು ತರುವಾಯ ಉಲ್ಲೇಖ (4)ರ ಆದೇಶದಲ್ಲಿ ಮಾರ್ಪಾಡು ಮಾಡಿ ಹೆಚ್ಚುವರಿಯೆಂದು ಗುರುತಿಸಲಾದ ನೌಕರರು/ಅಧಿಕಾರಿಗಳ ಸೇವೆಯನ್ನು ಖಾಯಂ ಆಗಿ ಬೇರೆ ಇಲಾಖೆಯ ಹುದ್ದೆಗಳಿಗೆ ವರ್ಗಾಯಿಸುವವರೆಗೆ ಅವರುಗಳ ಲೀನ್ ಅನ್ನು ಇಲಾಖೆಯಲ್ಲಿಯೇ ಉಳಿಸಿಕೊಳ್ಳಲು ಆದೇಶಿಸಲಾಗಿರುತ್ತದೆ. ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಅಧಿಕಾರಿ/ನೌಕರರಿಗೆ ಪ್ರಸ್ತುತ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಲ್ಲಿ ಸ್ಥಳಾವಕಾಶ ಮಾಡಿಕೊಟ್ಟು ಈ ಪ್ರಕ್ರಿಯೆಗಳ ನಂತರವೂ ಉಳಿಯಲ್ಪಡುವ ನೌಕರರು/ಅಧಿಕಾರಿಗಳನ್ನು ಬೇರೆ ಇಲಾಖೆಯ ಖಾಲಿ ಇರುವ ಸಮಾನಾಂತರ ಹುದ್ದೆಗಳಲ್ಲಿ ಖಾಯಂ ಆಗಿ ವಿಲೀನಗೊಳ್ಳುವವರೆಗೆ ಅವರ ಹುದ್ದೆಗಳ ಲೀನ್ ಅನ್ನು ಇಲಾಖೆಯಲ್ಲಿಯೇ ಉಳಿಸಿಕೊಂಡು ಅವರ ಸೇವೆಯನ್ನು ಇಲಾಖೆಯಲ್ಲಿಯೇ ಮುಂದುವರಿಸಬೇಕಾಗುತ್ತದೆ ಎಂದು ನಿರ್ಧರಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 7 ಇಟಿಎಂ 2004, ಬೆಂಗಳೂರು, ದಿನಾಂಕ: 25ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದ ಪುನರ್ ವ್ಯವಸ್ಥೆ ಮತ್ತು ಹೆಚ್ಚುವರಿಯಾಗಿ ಗುರುತಿಸಲಾದ 167 ಹುದ್ದೆಗಳನ್ನು ರದ್ದುಗೊಳಿಸಲು ತೀರ್ಮಾನಿಸಲಾಗಿದೆ. ಹೆಚ್ಚುವರಿಯಾಗಿ ಗುರುತಿಸಲಾದ ಹುದ್ದೆಗಳ ವಿವರವನ್ನು ಅನುಬಂಧ-2ರಲ್ಲಿ ಕೊಡಲಾಗಿದೆ. ಈ 167 (ಒಂದುನೂರ ಅರವತ್ತೇಳು) ಹೆಚ್ಚುವರಿ ಹುದ್ದೆಗಳ ಪೈಕಿ ಖಾಲಿ ಇರುವ 27 ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಲಾಗಿದೆ. ಹೆಚ್ಚುವರಿ ಹುದ್ದೆಗಳಲ್ಲಿರುವ ಅಧಿಕಾರಿಗಳು/ನೌಕರರು ದಿ:1.9.2003ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಎಸ್‌ಡಿಇ 2003ರ ಪ್ರಕಾರ ವಿಶೇಷ ಸ್ವಯಂ ನಿವೃತ್ತಿ ಆಯ್ಕೆ ಮಾಡಿಕೊಳ್ಳಲು ಅರ್ಹರಿರುತ್ತಾರೆ.

ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಅಧಿಕಾರಿ/ನೌಕರರು ಖಾಯಂ ಆಗಿ ಬೇರೆ ಇಲಾಖೆಯಲ್ಲಿ ವಿಲೀನಾತಿ ಮಾಡಿದ ನಂತರ ಅವರ ಹುದ್ದೆಗಳು ಸ್ವಯಂಚಾಲಿತವಾಗಿ ರದ್ದಾಗುತ್ತವೆ. ಹೆಚ್ಚುವರಿ ಪಟ್ಟಿಯಲ್ಲಿರುವ ಅಧಿಕಾರಿ/ನೌಕರರು ನಿವೃತ್ತರಾಗುವ ದಿನಾಂಕದಿಂದ ಸಹ ಹುದ್ದೆಗಳು ಸ್ವಯಂಚಾಲಿತವಾಗಿ ರದ್ದಾಗುತ್ತದೆ. ಅಲ್ಲಿಯವರೆಗೆ ಸದರಿ ಅಧಿಕಾರಿಗಳ/ನೌಕರರ ವೇತನ ಪಾವತಿ ಹಾಗೂ ಇಲಾಖೆಯಲ್ಲಿನ ಸೇವಾ ಜೇಷ್ಠತೆ ರಕ್ಷಣೆಯ ಸೀಮಿತ ಉದ್ದೇಶಕ್ಕೊಳಪಟ್ಟು ಸದರಿ ಹುದ್ದೆಗಳ ಲೀನ್ ಅನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಕೇಂದ್ರ ಕಚೇರಿಯಲ್ಲಿಯೇ ಉಳಿಸಿಕೊಳ್ಳಲು ಅನುಮತಿಸಲಾಗಿದೆ.

ಉದ್ಯೋಗ ವಿಭಾಗದ 167 ಹೆಚ್ಚುವರಿ ಹುದ್ದೆಗಳ ರದ್ದತಿಯ ಹಿನ್ನೆಲೆಯಲ್ಲಿ, ವೃಂದ ಬಲವನ್ನು ಸೂಕ್ತವಾಗಿ ಪರಿಷ್ಕರಿಸಲು ಅನುವಾಗುವಂತೆ ಪ್ರಸ್ತಾವನೆಯನ್ನು ವೃಂದ ಪರಿಶೀಲನಾ ಸಮಿತಿಯ ಮುಂದೆ ಮಂಡಿಸುವುದು.

ಹೆಚ್ಚುವರಿ ಹುದ್ದೆಗಳ ರದ್ದತಿಯ ಪ್ರಕ್ರಿಯೆಯಿಂದಾಗಿ ಉದ್ಭವಿಸಬಹುದಾದ ಆರ್ಥಿಕ/ಆಡಳಿತಾತ್ಮಕ ಅಧಿಕಾರ ಪ್ರತ್ಯಾಯೋಜನೆಯನ್ನು ಬೇರೆ ಅಧಿಕಾರಿಗಳಿಗೆ ವಹಿಸಲು ಸೂಕ್ತ ಕ್ರಮ ಜರುಗಿಸುವುದು, ಅಂತೆಯೇ ಕಚೇರಿಗಳಿಗೆ, ಸಂಬಂಧಿಸಿದಂತೆ ವಾಹನ/ಪೀಠೋಪಕರಣ ಹಾಗೂ ಇತರೆ ಪರಿಕರಗಳನ್ನು ಬೇರೆಡೆ ಮರು ಹೊಂದಾಣಿಕೆ ಮಾಡಲು ಸೂಕ್ತ ಕ್ರಮ ಜರುಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ. ಉದ್ಯೋಗ ಮತ್ತು ತರಬೇತಿ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 7 ಇಟಿಎಂ 2004, ಬೆಂಗಳೂರು, ದಿನಾಂಕ: 25ನೇ ಮೇ 2005ರ ಅನುಬಂಧ-1**

| ಕ್ರ. ಸಂ. | ಹುದ್ದೆಗಳು | ಮಂಜೂರಾಗಿರುವುದು | ಅವಶ್ಯವಿರುವುದು | ದಿನಾಂಕ:31.01.2005ಕ್ಕೆ ಹೆಚ್ಚುವರಿ | | |
|---|---|---|---|---|---|---|
| | | | | ಖಾಲಿ | ಭರ್ತಿ | ಒಟ್ಟು |
| 1. | ಜಂಟಿ ನಿರ್ದೇಶಕರು | 1 | 1 | 0 | 0 | 0 |
| 2. | ಉಪ ನಿರ್ದೇಶಕರು | 2 | 2 | 0 | 0 | 0 |
| 3. | ಸಹಾಯಕ ನಿರ್ದೇಶಕರು | 23 | 12 | 02 | 9 | 11 |
| 4. | ಉದ್ಯೋಗಾಧಿಕಾರಿಗಳು | 49 | 28 | 15 | 6 | 21 |
| 5. | ಲೆಕ್ಕ ಅಧೀಕ್ಷಕರು | 1 | 0 | 0 | 1 | 1 |
| 6. | ಸಹಾಯಕ ಉದ್ಯೋಗಾಧಿಕಾರಿಗಳು | 44 | 38 | 0 | 6 | 06 |
| 7. | ಪ್ರಥಮ ದರ್ಜೆ ಸಹಾಯಕರು | 33 | 24 | 7 | 2 | 09 |
| 8. | ಶೀಘ್ರಲಿಪಿಗಾರರು | 10 | 2 | 1 | 7 | 08 |
| 9. | ಬೆರಳಚ್ಚುಗಾರರು | 40 | 38 | 2 | 0 | 02 |
| 10. | ದ್ವಿತೀಯ ದರ್ಜೆ ಸಹಾಯಕರು | 127 | 37 | 0 | 90 | 90 |
| 11. | ಚಾಲಕರು | 1 | 1 | 0 | 0 | 0 |
| 12. | ಗ್ರೂಪ್ ಡಿ ನೌಕರರು | 86 | 67 | 0 | 19 | 19 |
| | **ಒಟ್ಟು** | **417** | **250** | **27** | **140** | **167** |

**ಎಂ.ಪಿ. ನಾಗರಾಜ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ. ಉದ್ಯೋಗ ಮತ್ತು ತರಬೇತಿ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 7 ಇಟಿಎಂ 2004, ಬೆಂಗಳೂರು, ದಿನಾಂಕ: 25ನೇ ಮೇ 2005ರ ಅನುಬಂಧ-2**

**ಸಹಾಯಕ ನಿರ್ದೇಶಕರು**

| ಕ್ರ. ಸಂ. | ಕಚೇರಿ ಹೆಸರು | ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಹುದ್ದೆಗಳ ಸಂಖ್ಯೆ |
|---|---|---|
| 1. | ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ (ಉದ್ಯೋಗ ವಿಭಾಗ), ಬೆಂಗಳೂರು. | 2 |
| 2. | ಯೋಜನಾ ಉದ್ಯೋಗ ವಿನಿಮಯ ಕೇಂದ್ರ, ಕಾರವಾರ. | 1 |
| 3. | ವಿಶಿಷ್ಟ ವೃತ್ತಿ ಮತ್ತು ಕಾರ್ಯನಿರ್ವಾಹಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| 4. | ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| 5. | ರಾಜ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| 6. | ವೃತ್ತಿ ಅಧ್ಯಯನ ಕೇಂದ್ರ, ಬೆಂಗಳೂರು. | 1 |
| 7. | ಉದ್ಯೋಗಾಭಿವೃದ್ಧಿ ಮತ್ತು ಕೈಗಾರಿಕೆಗಳಿಗೆ ಸುಧಾರಿತ ಸೇವಾ ಘಟಕ, ಬೆಂಗಳೂರು. | 1 |
| 8. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಬೆಂಗಳೂರು. | 1 |
| 9. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಚಿತ್ರದುರ್ಗ | 1 |
| 10. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಮಂಗಳೂರು. | 1 |
| | **ಒಟ್ಟು** | **11** |

**ಉದ್ಯೋಗಾಧಿಕಾರಿ**

| ಕ್ರ. ಸಂ. | ಕಚೇರಿ ಹೆಸರು | ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಹುದ್ದೆಗಳ ಸಂಖ್ಯೆ |
|---|---|---|
| 1. | ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ (ಉದ್ಯೋಗ ವಿಭಾಗ), ಬೆಂಗಳೂರು. | 1 |
| 2. | ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 2 |
| 3. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೆಳಗಾವಿ. | 2 |
| 4. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಗುಲ್ಬರ್ಗಾ. | 1 |
| 5. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮೈಸೂರು. | 2 |
| 6. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ರಾಯಚೂರು. | 1 |
| 7. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಶಿವಮೊಗ್ಗ. | 1 |
| 8. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ತುಮಕೂರು. | 1 |
| 9. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹುಬ್ಬಳ್ಳಿ. | 1 |
| 10. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಕೋಲಾರ. | 1 |
| 11. | ವೃತ್ತಿ ಅಧ್ಯಯನ ಕೇಂದ್ರ, ಬೆಂಗಳೂರು. | 2 |
| 12. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಬೆಂಗಳೂರು. | 1 |

| ಕ್ರ. ಸಂ. | ಕಚೇರಿ ಹೆಸರು | ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಹುದ್ದೆಗಳ ಸಂಖ್ಯೆ |
|---|---|---|
| 13. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಚಿತ್ರದುರ್ಗ. | 1 |
| 14. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಗುಲ್ಬರ್ಗಾ. | 1 |
| 15. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಹುಬ್ಬಳ್ಳಿ. | 1 |
| 16. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಮಂಗಳೂರು. | 1 |
| 17. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಮೈಸೂರು | 1 |
| | **ಒಟ್ಟು** | **21** |

**ಲೆಕ್ಕ ಅಧೀಕ್ಷಕರು**

| ಕ್ರ. ಸಂ. | ಕಚೇರಿ ಹೆಸರು | ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಹುದ್ದೆಗಳ ಸಂಖ್ಯೆ |
|---|---|---|
| 1. | ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ (ಉದ್ಯೋಗ ವಿಭಾಗ), ಬೆಂಗಳೂರು. | 1 |
| | **ಒಟ್ಟು** | **1** |

**ಸಹಾಯಕ ಉದ್ಯೋಗಾಧಿಕಾರಿ**

| ಕ್ರ. ಸಂ. | ಕಚೇರಿ ಹೆಸರು | ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಹುದ್ದೆಗಳ ಸಂಖ್ಯೆ |
|---|---|---|
| 1. | ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ (ಉದ್ಯೋಗ ವಿಭಾಗ), ಬೆಂಗಳೂರು. | 2 |
| 2. | ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 3 |
| 3. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೆಳಗಾವಿ. | 1 |
| | **ಒಟ್ಟು** | **6** |

**ಪ್ರಥಮ ದರ್ಜೆ ಸಹಾಯಕರು**

| ಕ್ರ. ಸಂ. | ಕಚೇರಿ ಹೆಸರು | ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಹುದ್ದೆಗಳ ಸಂಖ್ಯೆ |
|---|---|---|
| 1. | ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ (ಉದ್ಯೋಗ ವಿಭಾಗ), ಬೆಂಗಳೂರು. | 3 |
| 2. | ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| 3. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ದಾವಣಗೆರೆ. | 1 |
| 4. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಉಡುಪಿ. | 1 |
| 5. | ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಬೆಂಗಳೂರು. | 1 |
| 6. | ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಗುಲ್ಬರ್ಗಾ. | 1 |
| 7. | ರಾಜ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| | **ಒಟ್ಟು** | **9** |

**ದ್ವಿತೀಯ ದರ್ಜೆ ಸಹಾಯಕರು**

| ಕ್ರ. ಸಂ. | ಕಚೇರಿ ಹೆಸರು | ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಹುದ್ದೆಗಳ ಸಂಖ್ಯೆ |
|---|---|---|
| 1. | ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ (ಉದ್ಯೋಗ ವಿಭಾಗ), ಬೆಂಗಳೂರು. | 9 |
| 2. | ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 9 |
| 3. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೆಳಗಾವಿ. | 1 |
| 4. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಗುಲ್ಬರ್ಗಾ. | 4 |
| 5. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮೈಸೂರು. | 2 |
| 6. | ಯೋಜನಾ ಉದ್ಯೋಗ ವಿನಿಮಯ ಕೇಂದ್ರ, ಕಾರವಾರ. | 1 |
| 7. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, (ಸಾಮಾನ್ಯ), ಬೆಂಗಳೂರು. | 2 |
| 8. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ (ತಾಂತ್ರಿಕ), ಬೆಂಗಳೂರು. | 4 |
| 9. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಳ್ಳಾರಿ. | 2 |
| 10. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೀದರ್. | 3 |
| 11. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಿಜಾಪುರ. | 3 |
| 12. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಿಕ್ಕಮಗಳೂರು. | 2 |
| 13. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಿತ್ರದುರ್ಗ. | 2 |
| 14. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹಾಸನ. | 2 |

| ಕ್ರ. ಸಂ. | ಕಚೇರಿ ಹೆಸರು | ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಹುದ್ದೆಗಳ ಸಂಖ್ಯೆ |
|---|---|---|
| 15. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಡ್ಯ. | 3 |
| 16. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಡಿಕೇರಿ. | 2 |
| 17. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಗಳೂರು. | 2 |
| 18. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ರಾಯಚೂರು. | 2 |
| 19. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಶಿವಮೊಗ್ಗ. | 3 |
| 20. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ತುಮಕೂರು. | 2 |
| 21. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹುಬ್ಬಳ್ಳಿ. | 3 |
| 22. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಕೋಲಾರ. | 3 |
| 23. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಾಗಲಕೋಟೆ. | 1 |
| 24. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಾಮರಾಜನಗರ. | 2 |
| 25. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ದಾವಣಗೆರೆ. | 2 |
| 26. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಗದಗ. | 2 |
| 27. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹಾವೇರಿ. | 2 |
| 28. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಕೊಪ್ಪಳ. | 2 |
| 29. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಉಡುಪಿ. | 2 |
| 30. | ವಿಶಿಷ್ಠ ವೃತ್ತಿ ಮತ್ತು ಕಾರ್ಯನಿರ್ವಾಹಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| 31. | ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಬೆಂಗಳೂರು. | 1 |
| 32. | ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಧಾರವಾಡ. | 1 |
| 33. | ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಗುಲ್ಬರ್ಗಾ. | 1 |
| 34. | ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಮಂಗಳೂರು. | 1 |
| 35. | ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಮೈಸೂರು. | 1 |
| 36. | ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| 37. | ರಾಜ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| 38. | ವೃತ್ತಿ ಅಧ್ಯಯನ ಕೇಂದ್ರ, ಬೆಂಗಳೂರು | 1 |
| 39. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಬೆಂಗಳೂರು. | 1 |
| 40. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಹುಬ್ಬಳ್ಳಿ. | 1 |
| | ಒಟ್ಟು | 90 |

**ಶೀಘ್ರಲಿಪಿಗಾರರು**

| ಕ್ರ. ಸಂ. | ಕಚೇರಿ ಹೆಸರು | ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಹುದ್ದೆಗಳ ಸಂಖ್ಯೆ |
|---|---|---|
| 1. | ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| 2. | ಉದ್ಯೋಗಾಭಿವೃದ್ಧಿ ಮತ್ತು ಕೈಗಾರಿಕೆಗಳಿಗೆ ಸುಧಾರಿತ ಸೇವಾ ಘಟಕ, ಬೆಂಗಳೂರು. | 1 |
| 3. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಬೆಂಗಳೂರು. | 1 |
| 4. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಹುಬ್ಬಳ್ಳಿ. | 1 |
| 5. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಚಿತ್ರದುರ್ಗ. | 1 |
| 6. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಗುಲ್ಬರ್ಗಾ. | 1 |
| 7. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಮಂಗಳೂರು. | 1 |
| 8. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಮೈಸೂರು. | 1 |
| | ಒಟ್ಟು | 8 |

**ಬೆರಳಚ್ಚುಗಾರರು**

| ಕ್ರ. ಸಂ. | ಕಚೇರಿ ಹೆಸರು | ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಹುದ್ದೆಗಳ ಸಂಖ್ಯೆ |
|---|---|---|
| 1. | ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ (ಉದ್ಯೋಗ ವಿಭಾಗ), ಬೆಂಗಳೂರು. | 1 |
| 2. | ರಾಜ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| | ಒಟ್ಟು | 2 |

**ಗ್ರೂಪ್-ಡಿ ಉದ್ಯೋಗಿಗಳು**

| ಕ್ರ. ಸಂ. | ಕಚೇರಿ ಹೆಸರು | ಹೆಚ್ಚುವರಿಯೆಂದು ಗುರುತಿಸಲ್ಪಟ್ಟ ಹುದ್ದೆಗಳ ಸಂಖ್ಯೆ |
|---|---|---|
| 1. | ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ (ಉದ್ಯೋಗ ವಿಭಾಗ), ಬೆಂಗಳೂರು. | 4 |
| 2. | ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| 3. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೆಳಗಾವಿ | 1 |
| 4. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಗುಲ್ಬರ್ಗಾ | 1 |
| 5. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮೈಸೂರು | 1 |
| 6. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹಾಸನ | 1 |
| 7. | ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ,ಬೆಂಗಳೂರು. | 2 |
| 8. | ರಾಜ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು. | 1 |
| 9. | ವೃತ್ತಿ ಅಧ್ಯಯನ ಕೇಂದ್ರ, ಬೆಂಗಳೂರು | 1 |
| 10. | ಉದ್ಯೋಗಾಭಿವೃದ್ಧಿ ಮತ್ತು ಕೈಗಾರಿಕೆಗಳಿಗೆ ಸುಧಾರಿತ ಸೇವಾ ಘಟಕ, ಬೆಂಗಳೂರು | 1 |
| 11. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಬೆಂಗಳೂರು. | 1 |
| 12. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಚಿತ್ರದುರ್ಗ | 2 |
| 13. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಗುಲ್ಬರ್ಗಾ | 1 |
| 14. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಅಧಿನಿಯಮ ಜಾರಿ ಘಟಕ, ಮಂಗಳೂರು | 1 |
| | **ಒಟ್ಟು** | **19** |
| | **ಗ್ರ್ಯಾಂಡ್ ಟೋಟಲ್** | **167** |

**ಎಂ.ಪಿ. ನಾಗರಾಜ**

ಪಿ.ಆರ್. 745 ಪೀಠಾಧಿಕಾರಿ, ಕಾರ್ಮಿಕ ಇಲಾಖೆ. ಉದ್ಯೋಗ ಮತ್ತು ತರಬೇತಿ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಮೆ: ವಿ.ಆರ್. ದೇಶಪಾಂಡೆ ಮೆಮೋರಿಯಲ್ ಟ್ರಸ್ಟ್ ಹಳಿಯಾಳ ಇವರಿಗೆ ಬೊಂಬು ಸರಬರಾಜು ಮಾಡುವ ಬಗ್ಗೆ.

**ಓದಲಾಗಿದೆ:** 1. ಸಂಖ್ಯೆ: ಎ7/ಬಿಎಂಬಿ/ಸಿಆರ್-1/2003-04/04-05 ದಿನಾಂಕ: 26.3.2005, ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಪ್ರಸ್ತಾವನೆ ಹಾಗೂ ದಿನಾಂಕ: 18.4.2005ರ ಪತ್ರ.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ತಮ್ಮ ಉಲ್ಲೇಖಿತ ಪತ್ರ ದಿನಾಂಕ: 26.3.2005ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಮೆ: ವಿ.ಆರ್. ದೇಶಪಾಂಡೆ ಮೆಮೋರಿಯಲ್ ಟ್ರಸ್ಟ್ ಹಳಿಯಾಳ ಇವರಿಗೆ ಬೊಂಬು ಸರಬರಾಜು ಮಾಡುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿ ಸದರಿ ಟ್ರಸ್ಟ್ ಗ್ರಾಮೀಣ ಭಾಗದ ನಿರುದ್ಯೋಗಿ ಯುವಕ/ಯುವತಿಯರಿಗೆ ಬೊಂಬು ಕಚ್ಚಾ ವಸ್ತುವಿನಿಂದ ಸ್ವ ಉದ್ಯೋಗ ತರಬೇತಿ, ಅಗರಬತ್ತಿ ತಯಾರಿಕೆ ಕಾರ್ಯಕ್ರಮ ಹಮ್ಮಿಕೊಳ್ಳಲು ಪ್ರತಿವರ್ಷ 10,000 ಸಂಖ್ಯೆ ಹಸಿ ಬೊಂಬುಗಳನ್ನು ಮುಂದಿನ ಐದು ವರ್ಷಗಳ ಅವಧಿಗೆ ರಿಯಾಯಿತಿ ದರದಲ್ಲಿ ಮಂಜೂರು ಮಾಡಲು ಅರಣ್ಯ ಸಂರಕ್ಷಣಾಧಿಕಾರಿಗಳು ಕೆನರಾ ವೃತ್ತರವರು ಕೋರಿದ್ದು ಸದರಿ ಸಂಖ್ಯೆಗೆ ಶೇ.50ರಷ್ಟು ಕಡಿಮೆ ದರದಲ್ಲಿ ಬೊಂಬು ನೀಡಲು ಕೋರಿದ್ದು, ಅರಣ್ಯ ಸಂರಕ್ಷಣಾಧಿಕಾರಿಗಳು ತಮ್ಮ ವರದಿಯಲ್ಲಿ ಹಳಿಯಾಳ ವಿಭಾಗದ ಕಾರ್ಯಯೋಜನೆಯಂತೆ ಪ್ರತಿ ವರ್ಷ 5.44 ಲಕ್ಷ ಒಳ್ಳೆಯ ಹಸಿರು ಬೊಂಬುಗಳು ದೊರೆಯುತ್ತವೆಂದು ಒಣಗಿದ ಮತ್ತು ಬಿದ್ದಿರುವ ಬೊಂಬುಗಳ ಒಟ್ಟು ಪ್ರಮಾಣ 44,795 ಟನ್‌ಗಳಷ್ಟು ಉತ್ಪಾದನೆ ಇರುತ್ತದೆಂದು ವರದಿಸಿರುವರೆಂದು ವರದಿ ಮಾಡಿರುತ್ತಾರೆ.

ಪ್ರಸ್ತುತ ಕೆನರಾ ವೃತ್ತದಲ್ಲಿ ಚಾಲ್ತಿಯಲ್ಲಿರುವ ಬೊಂಬು ದರ ಮೇದಾರರಿಗೆ ರೂ.10.82 (ಪ್ರತಿ ಒಂದಕ್ಕೆ) ಮೇದಾರೇತರರಿಗೆ ರೂ.12.20 (ಪ್ರತಿ ಒಂದಕ್ಕೆ) ತೆರಿಗೆಗಳು ಪ್ರತ್ಯೇಕವಿದ್ದು ಮೇದಾರರಿಗೆ ಮಾತ್ರ ರಿಯಾಯಿತಿ ದರದಲ್ಲಿ ಬೊಂಬನ್ನು ಮಂಜೂರು ಮಾಡಲು ಅವಕಾಶವಿರುವುದಾಗಿ ವರದಿ ಮಾಡಿದ್ದು, ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಆದೇಶ ಹೊರಡಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಅಪಜೀ 56 ಎಫ್‌ಎಡಿ 2005, ಬೆಂಗಳೂರು, ದಿನಾಂಕ: 23ನೇ ಮೇ 2005

ಮೆ: ವಿ.ಆರ್. ದೇಶಪಾಂಡೆ ಮೆಮೋರಿಯಲ್ ಟ್ರಸ್ಟ್ ಹಳಿಯಾಳ ಇವರಿಗೆ ಗ್ರಾಮೀಣ ಭಾಗದ ನಿರುದ್ಯೋಗಿ ಯುವಕ/ಯುವತಿಯರಿಗೆ ಬೊಂಬು ಕಚ್ಚಾ ವಸ್ತುವಿನಿಂದ ಸ್ವ ಉದ್ಯೋಗ ತರಬೇತಿ, ಅಗರಬತ್ತಿ ತಯಾರಿಕೆ ಕಾರ್ಯಕ್ರಮ ಹಮ್ಮಿಕೊಳ್ಳಲು ಪ್ರತಿವರ್ಷ 10,000 ಸಂಖ್ಯೆ ಹಸಿ ಬೊಂಬುಗಳನ್ನು ಮುಂದಿನ ಐದು ವರ್ಷಗಳ ಅವಧಿಗೆ (2005-06 ರಿಂದ 2009-2010ರವರೆಗೆ ಮಾತ್ರ) ರಿಯಾಯಿತಿ ದರದಲ್ಲಿ ಪ್ರತಿ ವರ್ಷ 10,000 ಹಸಿ ಬೊಂಬನ್ನು ಪ್ರತಿ ಒಂದಕ್ಕೆ ರೂ. 10.82 (ಹತ್ತು ರೂಪಾಯಿ ಎಂಭತ್ತೆರಡು ಪೈಸೆ ಮಾತ್ರ) ದರದಲ್ಲಿ ನಿಗದಿಪಡಿಸಿ ಸರಬರಾಜು ಮಾಡಲು ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಮಂಜೂರಾತಿಯನ್ನು ನೀಡಲಾಗಿದೆ.

ಮೇಲ್ಕಂಡ ರಿಯಾಯಿತಿ ದರದಲ್ಲಿ ಒದಗಿಸಲಾಗುವ ಬೊಂಬನ್ನು ಸದರಿ ಟ್ರಸ್ಟ್ ಗ್ರಾಮೀಣ ಭಾಗದ ನಿರುದ್ಯೋಗಿ ಯುವಕ/ಯುವತಿಯರಿಗೆ ಬೊಂಬು ಕಚ್ಚಾ ವಸ್ತುವಿನಿಂದ ಸ್ವ ಉದ್ಯೋಗ ತರಬೇತಿ, ಅಗರಬತ್ತಿ ತಯಾರಿಕೆ ಕಾರ್ಯಕ್ರಮ ಹಮ್ಮಿಕೊಳ್ಳುವ ಉದ್ದೇಶಕ್ಕೆ ಮಾತ್ರ ಬಳಸಿಕೊಳ್ಳುವುದನ್ನು ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಖಚಿತಪಡಿಸಿಕೊಂಡು ಬಿಡುಗಡೆ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ಜಯಲಕ್ಷ್ಮಿ**

ಪಿ.ಆರ್. 746 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಜಂಟಿ ಇಲಾಖಾ ವಿಚಾರಣೆ-ಶ್ರೀ ವೈ. ಸದಾಶಿವ, ನಿವೃತ್ತ ಕೆಎಎಸ್ ಅಧಿಕಾರಿ ಮತ್ತು ಇತರರ ವಿರುದ್ಧ ಇಲಾಖಾ ವಿಚಾರಣೆ-ಸೇವೆಯಲ್ಲಿರುವ ಆಪಾದಿತರುಗಳಿಗೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 74 ಎಸ್‌ಇಎನ್ 2002, ದಿನಾಂಕ: 7.4.2004.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 74 ಎಸ್‌ಇಎನ್ 2002 (1), ದಿನಾಂಕ: 7.4.2004.
3. ಶ್ರೀ ಎಸ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರ ದಿನಾಂಕ: 9.11.2004 ಮತ್ತು 10.11.2004ರ ವಿಚಾರಣಾ ವರದಿ.
4. ನೋಟೀಸ್ ಕ್ರಮಾಂಕ ಸಿಆಸುಇ 74 ಎಸ್‌ಇಎನ್ 2002 ದಿನಾಂಕ 6.12.2004.
5. ಶ್ರೀ ರವಿಕುಮಾರ್ ಕಮಲಾಪುರಕರ್, ಮುಖ್ಯ ಲೆಕ್ಕಾಧಿಕಾರಿ ಅವರ ಉತ್ತರ (ದಿನಾಂಕ ರಹಿತ)

**ಪ್ರಸ್ತಾವನೆ:**

ಬೀದರ್ ಜಿಲ್ಲಾ ಪಂಚಾಯತ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಅನುಮೋದಿಸಲ್ಪಟ್ಟ ಪಟ್ಟಿಯಲ್ಲಿ ಇಲ್ಲದ, ಇಲಾಖೆಗೆ ಉಪಯೋಗಕ್ಕೆ ಬಾರದ ಹಾಗೂ ಔಷಧವಲ್ಲದ Amcrylate and Bio-Adesive ಎಂಬ ರಾಸಾಯನಿಕವನ್ನು ಖರೀದಿಸುವ ಮೂಲಕ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳ ನಷ್ಟ ಉಂಟು ಮಾಡಿ ತೀವ್ರ ದುರ್ನಡತೆ ಎಸಗಿದ ಆರೋಪಗಳಿಗಾಗಿ ಈ ಕೆಳಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಮೇಲೆ (1) ಮತ್ತು (2)ರಲ್ಲಿ ಓದಲಾದ ದಿನಾಂಕ: 7.4.2004ರ ಸರ್ಕಾರಿ ಆದೇಶಗಳಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಎಸ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು.

1. ಶ್ರೀ ವೈ. ಸದಾಶಿವ, ನಿವೃತ್ತ ಕೆಎಎಸ್ ಅಧಿಕಾರಿ.
2. ಡಾ: ಕೆ. ಸುಂದರಮ್ಮ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ.
3. ಶ್ರೀ ರವಿಕುಮಾರ್ ಕಮಲಾಪುರಕರ್, ನಿವೃತ್ತ ಮುಖ್ಯ ಲೆಕ್ಕಾಧಿಕಾರಿ.
4. ಶ್ರೀ ಸೈಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕರು.
5. ಶ್ರೀ ವಿಶ್ವನಾಥ್, ಪ್ರಥಮ ದರ್ಜೆ ಸಹಾಯಕರು.
6. ಶ್ರೀ ಮಾಚಕಲ್ಲಪ್ಪ, ಪ್ರಥಮ ದರ್ಜೆ ಸಹಾಯಕರು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (3)ರಲ್ಲಿ ಓದಲಾದ ದಿನಾಂಕ: 9.11.2004 ಮತ್ತು 10.11.2004 ರಂದು ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಗಳನ್ನು ಪರಿಶೀಲಿಸಲಾಗಿ 6 ಮಂದಿ ಆರೋಪಿತರುಗಳ ಪೈಕಿ ಕ್ರಮ ಸಂಖ್ಯೆ: 5 ಮತ್ತು 6ರಲ್ಲಿನ ನೌಕರರಾದ ಶ್ರೀ ವಿಶ್ವನಾಥ್ ಮತ್ತು ಶ್ರೀ ಮಾಚಕಲ್ಲಪ್ಪ ಅವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು ಹಾಗೂ ಉಳಿದ ಎಲ್ಲಾ 4 ಜನ ಆರೋಪಿತರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿವೆಯೆಂದು ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ:

> ಪ್ರತಿ ಅಧಿಕಾರಿ/ನೌಕರರಿಗೆ ಸಂಬಂಧಿಸಿದಂತೆ ಆರೋಪದಲ್ಲಿ ಸ್ವಲ್ಪ ಬದಲಾವಣೆ ಇದ್ದರೂ ಸಹ ಒಂದೇ ಹಿನ್ನೆಲೆ ಹೊಂದಿರುವುದರಿಂದ ಅದನ್ನು ಜಂಟಿಯಾಗಿ ಪರಿಗಣಿಸಿ ಆರೋಪಗಳ ಸಂಬಂಧ ವಾದ ಪ್ರತಿವಾದಗಳನ್ನು ಕೇಳಿ ಮಂಡನಾಧಿಕಾರಿಗಳು ಮಂಡಿಸಿರುವ ಸಾಕ್ಷ್ಯಾಧಾರಗಳನ್ನು ಗಣನೆಗೆ ತೆಗೆದುಕೊಂಡು ಪಾರದರ್ಶಕ ನಿಯಮಗಳನ್ನು ಪಾಲಿಸದಿರುವುದು ಒಂದೇ ದಿನಾಂಕದಂದು ಅಧಿಕಾರಿಗಳ ಅಧಿಕಾರದ ಮಿತಿಯೊಳಗೆ ಬರುವಂತೆ ಖರೀದಿ ಮೊತ್ತವನ್ನು ಒಂದು ಲಕ್ಷಕ್ಕೆ ಮಿತಿಗೊಳಿಸಿ ಹಲವಾರು ಆದೇಶಗಳನ್ನು ನೀಡಿರುವುದು, ಸರ್ಕಾರವು ಕಪ್ಪು ಪಟ್ಟಿಯಲ್ಲಿ ಸೇರಿಸಿರುವ ಸಂಸ್ಥೆಯಿಂದ ಆರೋಗ್ಯ ಸೇವೆಗಳ ಯೋಜನಾ ನಿರ್ದೇಶಕರ ಅನುಮೋದಿತ ಪಟ್ಟಿಯಲ್ಲಿಲ್ಲದ ರಾಸಾಯನಿಕಗಳನ್ನು ಖರೀದಿಸಿರುವುದು ದೃಢಪಟ್ಟಿರುತ್ತದೆ ಎಂದು ನಿರ್ಣಯ ನೀಡಿರುತ್ತಾರೆ.

ವಿಚಾರಣಾಧಿಕಾರಿಗಳ ವರದಿಯ ಪ್ರತಿಯೊಡನೆ ಆರೋಪ ಸಾಬೀತಾಗಿರುವ ಆರೋಪಿಗಳಿಗೆ ಮೇಲೆ (4)ರಲ್ಲಿ ಓದಲಾದ ದಿನಾಂಕ 6.12.2004ರ ನೋಟೀಸ್ ನೀಡಿ ವಿಚಾರಣಾ ವರದಿಯ ಕುರಿತು ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಅದರಂತೆ ಸೇವೆಯಿಂದ ನಿವೃತ್ತರಾಗಿರುವ ಮೂವರು ಅಧಿಕಾರಿಗಳಾದ ಶ್ರೀ ವೈ. ಸದಾಶಿವ, ನಿವೃತ್ತ ಕೆಎಎಸ್ ಅಧಿಕಾರಿ, ಡಾ: ಕೆ. ಸುಂದರಮ್ಮ, ನಿವೃತ್ತ ಜಿಲ್ಲಾ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ಹಾಗೂ ಶ್ರೀ ಸಯ್ಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕರು, ಬೀದರ್ ಜಿಲ್ಲಾ ಪಂಚಾಯತ್, ಅವರುಗಳು ನೀಡಿರುವ ವಿವರಣೆಯನ್ನು ಕೆ.ಸಿ.ಎಸ್.ಆರ್‌ನ ನಿಯಮ 214ರಡಿ ಪರಿಶೀಲಿಸಿ ಲೋಕಸೇವಾ ಆಯೋಗದೊಂದಿಗೆ ಸಮಾಲೋಚನೆಯಲ್ಲಿದ್ದು ಅವರುಗಳ ಬಗ್ಗೆ ಪ್ರತ್ಯೇಕವಾಗಿ ಕ್ರಮ ತೆಗೆದುಕೊಳ್ಳಲಾಗುವುದು. ಇನ್ನೊಬ್ಬ ಆರೋಪಿತರಾದ ಶ್ರೀ ರವಿಕುಮಾರ್ ಕಮಲಾಪುರಕರ್ ಅವರು ದಿನಾಂಕ ಮತ್ತು ಸಹಿ ರಹಿತ ಉತ್ತರ ಸಲ್ಲಿಸಿ ವಿಚಾರಣಾಧಿಕಾರಿಯವರು ತಮ್ಮ ಮೇಲೆ ಹೊರಿಸಿರುವ ಎಲ್ಲಾ 7 ಆರೋಪಗಳನ್ನು ಸಂಯೋಜಿಸಿ ನಿರ್ಣಯ ನೀಡಿರುತ್ತಾರೆ. ಪ್ರತ್ಯೇಕವಾಗಿ ಸಾಕ್ಷ್ಯಾಧಾರಗಳ ವಿಶ್ಲೇಷಣೆ ಮಾಡಿರುವುದಿಲ್ಲ ಹಾಗೂ ತಮ್ಮ ವಾದದಲ್ಲಿ ಮಂಡಿಸಿರುವ ಅಂಶಗಳನ್ನು ಪರಿಗಣಿಸಿರುವುದಿಲ್ಲ, ವಿಷಯದ ಬಗ್ಗೆ ಮಾಹಿತಿ ಗೊತ್ತಿರದ ವ್ಯಕ್ತಿಗಳನ್ನು ಸಾಕ್ಷಿಗಳನ್ನಾಗಿ ಪರಿಗಣಿಸಿ ಅವರಿಂದ ಸಾಕ್ಷ್ಯವನ್ನು ಪಡೆಯಲಾಗಿದೆ, ಕಪ್ಪು ಪಟ್ಟಿಯಲ್ಲಿ ನಮೂದಾಗಿರುವ ಸಂಸ್ಥೆಯಿಂದ ಖರೀದಿಸಿರುವುದಾಗಿ ಆಪಾದಿಸಲಾಗಿದ್ದು ಆದರೆ ಯಾವುದೇ ಕಪ್ಪು ಪಟ್ಟಿಯನ್ನು ಹಾಜರು ಪಡಿಸಿರುವುದಿಲ್ಲ. ಹಾಗೂ Amcrylate and Bio-Adesive ಖರೀದಿಯ ಬಗ್ಗೆ ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿ ಸಭೆಯಲ್ಲಿ ನಿರ್ಣಯಿಸಿ ಅದರಂತೆ ಖರೀದಿಸಲಾಗಿದೆ ಮತ್ತು ಖರೀದಿಸಿರುವ ವಸ್ತು ದುರ್ಬಳಕೆ ಆಗಿದೆಯೆಂಬ ಬಗ್ಗೆ ಪುರಾವೆ ಇರುವುದಿಲ್ಲ. ಈ ವಸ್ತುವಿನ ಬೇಡಿಕೆಗೆ ಆರ್ಥಿಕ ಇಲಾಖೆಯು ಮಂಜೂರಾತಿ ನೀಡಿದ್ದು ಅದನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಯವರು ಖರೀದಿ ಮಾಡಿರುವುದರಿಂದ ಇದು ತಮ್ಮ ಕಾರ್ಯ ಹಂಚಿಕೆ ಹಾಗೂ ನಿರ್ವಹಿಸಿರುವ ಕಾರ್ಯದ ವ್ಯಾಪ್ತಿಯಲ್ಲಿ ಬಾರದೆ ಇರುವುದರಿಂದ, ಈ ಔಷಧಿಗೆ ಆಡಳಿತಾತ್ಮಕ ಅನುಮೋದನೆಯು ದೊರೆತ ನಂತರ ಔಷಧಿಯನ್ನು ಖರೀದಿಸಿರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಯಾವುದೇ ನಷ್ಟ ಉಂಟಾಗಿರುವುದಿಲ್ಲ ಮತ್ತು ಖರೀದಿಸಿರುವ ಔಷಧಿಗಳನ್ನು ಸಾರ್ವಜನಿಕರಿಗೆ ವಿತರಿಸಲಾಗಿದೆಯೆಂದು ತಿಳಿಸಿ ವಿಚಾರಣಾ ವರದಿಯು ನಿಯಮಗಳಿಗೆ ವ್ಯತಿರಿಕ್ತವಾಗಿರುವುದರಿಂದ ಹಾಗೂ ತಮ್ಮ ಅಂಶಗಳನ್ನು ವಿಚಾರಣಾ ವರದಿಯಲ್ಲಿ ವಿಶ್ಲೇಷಿಸಿ, ಪರಿಗಣಿಸಿ ನಿರ್ಣಯ ನೀಡದೆ ಇರುವುದರಿಂದ ಹಾಗೂ ಪ್ರತ್ಯೇಕ ಆರೋಪಗಳ ಬಗ್ಗೆ ಪ್ರತ್ಯೇಕ ನಿರ್ಣಯಗಳನ್ನು ದಾಖಲಿಸದೇ ಇರುವುದರಿಂದ ತಾವು ಪ್ರಸ್ತಾಪಿಸಿರುವ ಅಂಶಗಳನ್ನು ಪರಿಗಣಿಸಿ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಶ್ರೀ ರವಿಕುಮಾರ್ ಕಮಲಾಪುರಕರ್ ಅವರ ಉತ್ತರವನ್ನು ಪರಿಶೀಲಿಸಲಾಗಿ ಅವರ ವಿವರಣೆಗೆ ಸಹಿಯನ್ನು ಮಾಡಿರುವುದಿಲ್ಲವಾದ್ದರಿಂದ ಅದನ್ನು ಪರಿಗಣಿಸಲು ಸಾಧ್ಯವಿಲ್ಲ. ಆದಾಗ್ಯೂ ಅವರ ವಿವರಣೆಯಲ್ಲಿ ಯಾವುದೇ ಸಮರ್ಥನೀಯ ಕಾರಣಗಳು ಇಲ್ಲದಿರುವುದನ್ನು ಮನಗಂಡು ಹಾಗೂ ಉಳಿದ ಆರೋಪಿತರಾದ ಶ್ರೀ ವಿಶ್ವನಾಥ್, ಪ್ರಥಮ ದರ್ಜೆ ಸಹಾಯಕರು ಮತ್ತು ಶ್ರೀ ಮಾಚಕಲ್ಲಪ್ಪ, ಪ್ರಥಮ ದರ್ಜೆ ಸಹಾಯಕರು ಅವರುಗಳ ಬಗ್ಗೆ ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಸಹ ಪರಿಶೀಲಿಸಿ ಅದನ್ನು ಒಪ್ಪಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 74 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 23ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ರವಿಕುಮಾರ್ ಕಮಲಾಪುರಕರ್, ಮುಖ್ಯ ಲೆಕ್ಕಾಧಿಕಾರಿ ಅವರ ಮುಂದಿನ 3 ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ (with cumulative effect) ತಡೆ ಹಿಡಿಯಲು ಆದೇಶಿಸುತ್ತದೆ.

ಶ್ರೀ ವಿಶ್ವನಾಥ್, ಪ್ರಥಮ ದರ್ಜೆ ಸಹಾಯಕರು ಮತ್ತು ಶ್ರೀ ಮಾಚಕಲ್ಲಪ್ಪ, ಪ್ರಥಮ ದರ್ಜೆ ಸಹಾಯಕರು ಅವರುಗಳನ್ನು ಅವರುಗಳ ಮೇಲೆ ಹೊರಿಸಲಾದ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸದೆ ಹಾಗೂ ಇವರುಗಳ ಮಟ್ಟಿಗೆ ಮತ್ತು ಈ ಪ್ರಕರಣ ಸೀಮಿತಗೊಂಡಂತೆ ಅವರುಗಳ ವಿರುದ್ಧ ವಿಚಾರಣೆ ನಡೆಯದಿದ್ದಲ್ಲಿ ಅವರುಗಳು ಯಾವ ಸೌಲಭ್ಯವನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಆರೋಪಗಳು ಸಾಬೀತಾಗಿದ್ದು, ವಯೋ ನಿವೃತ್ತಿ ಹೊಂದಿರುವ ಶ್ರೀ ವೈ. ಸದಾಶಿವ, ಕೆಎಎಸ್ ಅಧಿಕಾರಿ, ಡಾ: ಕೆ. ಸುಂದರಮ್ಮ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ಮತ್ತು ಶ್ರೀ ಸಯ್ಯಾದ್ ಸತ್ತಾರ್, ಪತ್ರಾಂಕಿತ ಸಹಾಯಕರು ಅವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 214ನೇ ನಿಯಮದನ್ವಯ ಪ್ರತ್ಯೇಕ ಕ್ರಮ ಜರುಗಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 747

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

**ವಿಷಯ:** ಕಾರ್ಮಿಕ ನ್ಯಾಯಾಲಯದ ಪ್ರಕರಣ ಸಂಖ್ಯೆ: 123 : 91ನ ತೀರ್ಪಿನನ್ವಯ ಹಾಗೂ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಮತ್ತು ರಿಟ್ ಅಪೀಲಿನ ತೀರ್ಪಿನಂತೆ ಮರುನೇಮಕಗೊಂಡಿರುವ ಶ್ರೀ ಬಸವಯ್ಯ, ದಿನಗೂಲಿ ನೌಕರರ ಸೇವೆಯನ್ನು ಖಾಯಂ ಮಾಲಿ ಹುದ್ದೆಯಲ್ಲಿ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಕಾರ್ಮಿಕ ನ್ಯಾಯಾಲಯದ ಪ್ರಕರಣ ಸಂ: 123 :91ರ ಐತೀರ್ಪು ದಿನಾಂಕ: 27.5.1997.
2. ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 6160 :98 ಮತ್ತು 9134 :98ರ ತೀರ್ಪು ದಿನಾಂಕ: 15.6.1998.
3. ರಿಟ್ ಅಪೀಲು ಸಂಖ್ಯೆ: 554-555 : 99ರ ಅಂತಿಮ ತೀರ್ಪು ದಿನಾಂಕ: 3.6.2002.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 1 ಸೇಅವಿ 98, ದಿನಾಂಕ: 24.4.2003.
5. ಮರುನೇಮಕಾತಿ ಆದೇಶ ಸಂಖ್ಯೆ: ಕಾನಿಅ :ಅಮಂ: ಎಸಿಟಿ: 2: 02-03, ದಿನಾಂಕ: 5.5.2003.
6. ಕಾರ್ಯನಿರ್ವಾಹಕ ಅಧಿಕಾರಿ, ಮೈಸೂರು ಅರಮನೆ ಮಂಡಳಿ ಮೈಸೂರು ರವರ ಪತ್ರ ಸಂಖ್ಯೆ: ಕಾನಿಅ : ಅಮಂ: ಎಸಿಟಿ: 2: ಸಕ್ರಮ : 18 : 03-04 :2999, ದಿನಾಂಕ: 31.12.2003.

**ಪ್ರಸ್ತಾವನೆ:**

ಮೈಸೂರು ಅರಮನೆ ತೋಟಗಾರಿಕೆ ವಿಭಾಗದಲ್ಲಿ ಶ್ರೀ ಬಸವಯ್ಯ, ದಿನಗೂಲಿ ನೌಕರರು ಮಾಲಿಯಾಗಿ ದಿನಾಂಕ: 19.5.1984 ರಿಂದ ಕಾರ್ಯ ನಿರ್ವಹಿಸುತ್ತಿದ್ದು, ದಿನಾಂಕ: 26.12.1988 ರಂದು ದಿನಗೂಲಿ ಕೆಲಸದಿಂದ ತೆಗೆದು ಹಾಕಲಾಗಿತ್ತು. ಕೆಲಸದಿಂದ ವಜಾಗೊಳಿಸಿದ ಕ್ರಮವನ್ನು ಸದರಿ ನೌಕರರು ಮೈಸೂರಿನ ಕಾರ್ಮಿಕ ನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿ, ನ್ಯಾಯಾಲಯವು ದಿನಾಂಕ: 27.5.1997ರಲ್ಲಿ ಐತೀರ್ಪು ನೀಡಿ ನೌಕರರ ಮರುನೇಮಕಾತಿಗೆ ಮತ್ತು ಬಾಕಿ ವೇತನ ಪಾವತಿಸಲು ಆದೇಶಿಸಿತು. ತದನಂತರ ಮುಂದುವರಿದು ನೌಕರರು ಮೇಲೆ ಕ್ರಮ ಸಂಖ್ಯೆ 2ರಲ್ಲಿ ಓದಲಾದ ರಿಟ್ ಅರ್ಜಿ ಸಂಖ್ಯೆ 6160 : 98ರಲ್ಲಿ ಕಾರ್ಮಿಕ ನ್ಯಾಯಾಲಯದ ಆದೇಶವನ್ನು ಜಾರಿಗೊಳಿಸುವಂತೆ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿದರು.

ಸರ್ಕಾರದ ಪರವಾಗಿ ಸಲ್ಲಿಸಿದ ರಿಟ್ ಅರ್ಜಿ ಸಂಖ್ಯೆ ಕಂಇ: 9134 : 98 ರಲ್ಲಿ ಕಾರ್ಮಿಕ ನ್ಯಾಯಾಲಯದ ಆದೇಶವನ್ನು ರದ್ದುಗೊಳಿಸುವಂತೆ ಕೋರಲಾಗಿತ್ತು.

ಈ ಎರಡೂ ರಿಟ್ ಅರ್ಜಿಗಳನ್ನು ವಿಚಾರಣೆ ನಡೆಸಿದ ಮಾನ್ಯ ಉಚ್ಚ ನ್ಯಾಯಾಲಯವು ಸರ್ಕಾರವು ಸಲ್ಲಿಸಿದ ರಿಟ್ ಅರ್ಜಿ ಸಂಖ್ಯೆ 9134 : 98ನ್ನು ರದ್ದುಗೊಳಿಸಿ ದಿನಗೂಲಿ ನೌಕರರ ಅರ್ಜಿಯನ್ನು ಅಂಗೀಕರಿಸಿ ಕಾರ್ಮಿಕ ನ್ಯಾಯಾಲಯದ ತೀರ್ಪನ್ನು ಎತ್ತಿ ಹಿಡಿಯಿತು.

ಕ್ರಮ ಸಂಖ್ಯೆ 3ರಲ್ಲಿ ಓದಲಾದ ರಿಟ್ ಅಪೀಲ್ ಸಂಖ್ಯೆ 554 : 99 ಮತ್ತು 555:99 ರಲ್ಲಿ ಸರ್ಕಾರವು ನೌಕರರಿಗೆ ಹಿಂದಿನ ಬಾಕಿಯನ್ನು ಪಾವತಿಸುವ ಬಗ್ಗೆ ಮರುಪರಿಶೀಲಿಸುವಂತೆ ಉಚ್ಚ ನ್ಯಾಯಾಲಯವನ್ನು ಕೋರಲಾಗಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 3.6.2002ರಲ್ಲಿ ತೀರ್ಪನ್ನು ನೀಡಿ ಕಾರ್ಮಿಕ ನ್ಯಾಯಾಲಯದ ಪ್ರಕರಣ ಸಂಖ್ಯೆ: 123 : 91ರ ದಿನಾಂಕ: 27.5.1997ರ ಐತೀರ್ಪನ್ನು ಮಾನ್ಯಗೊಳಿಸಿ ದಿನಗೂಲಿಯ ಶೇಕಡ 50ರಷ್ಟು ಮೊತ್ತವನ್ನು ಪಾವತಿಸಲು ಆದೇಶಿಸಿತು. ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ದಿನಗೂಲಿ ಆಧಾರದ ಮೇಲೆ ಮರುನೇಮಕ ಗೊಳಿಸಿ ಬಾಕಿ ದಿನಗೂಲಿಯನ್ನು ಸಹ ಪಾವತಿಸಲಾಗಿದೆ.

ಮೇಲೆ (6)ರಲ್ಲಿ ಓದಲಾದ ಕಾರ್ಯ ನಿರ್ವಾಹಣಾಧಿಕಾರಿ, ಮೈಸೂರು ಅರಮನೆ ಮಂಡಳಿ, ಮೈಸೂರು ರವರು ಅರಮನೆ ತೋಟಗಾರಿಕೆ ವಿಭಾಗದಲ್ಲಿ ಮರುನೇಮಕಗೊಂಡು ದಿನಗೂಲಿ ಮಾಲಿ ಹುದ್ದೆಯಲ್ಲಿ ಮುಂದುವರಿಯುತ್ತಿರುವ ಶ್ರೀ ಬಸವಯ್ಯ ಇವರು ದಿನಾಂಕ: 1.7.1984ರ ಪೂರ್ವದಲ್ಲಿ ದಿನಗೂಲಿಯಾಗಿ ಕೆಲಸಕ್ಕೆ ಸೇರಿದ್ದು ದಿನಾಂಕ: 30.6.1994ಕ್ಕೆ 10 ವರ್ಷಗಳ ಸೇವೆಯನ್ನು ಸಲ್ಲಿಸಿರುವುದರಿಂದ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್‌ಎಲ್‌ಸಿ 90, ದಿ: 6.8.1990 ರನ್ವಯ ಸಕ್ರಮಗೊಳಿಸಿ ಪ್ರಸ್ತುತ ಮೈಸೂರು ಅರಮನೆ ತೋಟಗಾರಿಕೆ ವಿಭಾಗದಲ್ಲಿ ಖಾಲಿ ಇರುವ ಖಾಯಂ ಮಾಲಿ ಹುದ್ದೆಯಲ್ಲಿ ಸಕ್ರಮಗೊಳಿಸಿ, ಆದೇಶ ಹೊರಡಿಸುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೈಸೂರು ಅರಮನೆ ಮಂಡಳಿಯ ಕಾರ್ಯ ನಿರ್ವಹಣಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 11 ಸೇಅವಿ 2004, ಬೆಂಗಳೂರು, ದಿನಾಂಕ: 25ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮತ್ತು ದಿನಾಂಕ: 6.8.90ರ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್‌ಎಲ್‌ಸಿ 90 ರನ್ವಯ, ದಿನಾಂಕ: 1.7.1984ರ ಪೂರ್ವದಲ್ಲಿ ನೇಮಕಗೊಂಡು ಸತತವಾಗಿ 10 ವರ್ಷಗಳ ಸೇವೆ ಪೂರೈಸಿದ್ದಲ್ಲಿ, ದಿನಾಂಕ: 1.1.90 ರಿಂದ ಅಥವಾ ದಿನಾಂಕ: 19.5.1984ರ ನಂತರ ಅಂತಹ ದಿನಗೂಲಿ ನೌಕರರ 10 ವರ್ಷ ಸತತ ಸೇವೆಯನ್ನು ಪೂರೈಸಿದ ದಿನಾಂಕದಿಂದ "ಡಿ" ವೃಂದದ ಕನಿಷ್ಠ ವೇತನ ಶ್ರೇಣಿಯಲ್ಲಿ ಸೇವೆಗೆ ಸಕ್ರಮಗೊಳಿಸುವ ಅವಕಾಶವಿರುವ ಹಿನ್ನೆಲೆಯಲ್ಲಿ ಶ್ರೀ ಬಸವಯ್ಯ, ಮಾಲಿ ಇವರನ್ನು ದಿನಾಂಕ: 6.8.1990ರ ಆದೇಶದನ್ವಯ, ದಿನಾಂಕ: 19.5.1994 ರಿಂದ ಸಕ್ರಮಗೊಳಿಸಲು ಮತ್ತು ದಿನಾಂಕ: 6.8.90ರ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್‌ಎಲ್‌ಸಿ 90 ರಲ್ಲಿ ವಿಧಿಸಿರುವ ಷರತ್ತುಗಳಿಗೆ ಒಳಪಟ್ಟು ಮೈಸೂರು ಅರಮನೆ ತೋಟಗಾರಿಕೆ ವಿಭಾಗದಲ್ಲಿ ಖಾಲಿ ಇರುವ ಖಾಯಂ ಮಾಲಿ ಹುದ್ದೆಯಲ್ಲಿ ಸಕ್ರಮಗೊಳಿಸಿ ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಸೇವಾ ನಿಯಮಗಳು-ಸಿ) ಶಾಖೆಯ ಟಿಪ್ಪಣಿಗಳ ಸಂಖ್ಯೆ: ಸಿಆಸುಇ 687 ಸೇನಿಸಿ 2004, ದಿನಾಂಕ: 6.8.2004 ಮತ್ತು ಸಿಆಸುಇ 48 ಸೇನಿಸಿ 2005, ದಿನಾಂಕ: 23.2.2005 ಹಾಗೂ ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ: ಲಾ 617-ಅಭಿಪ್ರಾಯ-1 2004, ದಿನಾಂಕ: 5.1.2005 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ : 626 : ವೆಚ್ಚ-5 : 2005, ದಿನಾಂಕ: 12.4.2005ರಲ್ಲಿ ನೀಡಲಾದ ಅಭಿಪ್ರಾಯದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

ಪಿ.ಆರ್. 748

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ, ಮೈಸೂರು ಕೇಂದ್ರ ಕಛೇರಿಯನ್ನು ಮೈಸೂರಿನಿಂದ ಬೆಂಗಳೂರಿಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:**
1. ಸಂಕಇ 12 ಕೆಎಂಯು 2004 ದಿ: 25.3.2004.
2. ಸಂಕಇ 17 ಕೆಎಂಯು 2004 ದಿ: 16.2.2005.
3. ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಆಯುಕ್ತರ ಟಿಪ್ಪಣಿ ಸಂಖ್ಯೆ: ಪ್ರಾಸಪ/ಅಕ/2/2003-04 ದಿ: 28.2.2004.
4. ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಆಯುಕ್ತರ ಪತ್ರ ಸಂಖ್ಯೆ: ಆಪ್ರಸಂಪ:ಮೈಕ:2005-06 ದಿ: 13.5.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ, ಮೈಸೂರು ಹುದ್ದೆಯನ್ನು ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ, ಮೈಸೂರು ಈ ಹುದ್ದೆಯನ್ನು ದಿ: 11.2.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಮೈಸೂರಿನಲ್ಲಿರುವ ಆಯುಕ್ತರು, ಪಾರಂಪರಿಕ ಮತ್ತು ವಸ್ತುಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಟಿಪ್ಪಣಿಯಲ್ಲಿ ಕೇಂದ್ರ ಕಛೇರಿಯನ್ನು ಬೆಂಗಳೂರಿನಲ್ಲಿ ಸ್ಥಾಪಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟಿರುತ್ತಾರೆ ಮತ್ತು ಇದಕ್ಕೆ ಸಮರ್ಥನೆಯಾಗಿ ಈ ಕೆಳಕಂಡ ಅಂಶಗಳನ್ನು ಸರ್ಕಾರದ ಮುಂದೆ ಇಟ್ಟಿರುತ್ತಾರೆ.

ಅ) ಪರಂಪರೆ ಸಂರಕ್ಷಣೆಗಾಗಿ ಈ ಇಲಾಖೆಯು ಇತರೇ ಇಲಾಖೆಗಳು, ಪ್ರಾಧಿಕಾರಗಳು, ಸರ್ಕಾರೇತರ ಸಂಸ್ಥೆಗಳ ಮೂಲಕವೇ ಕಾರ್ಯ ನಿರ್ವಹಿಸಬೇಕಾಗುತ್ತದೆ. ಏಕೆಂದರೆ, ಈ ಇಲಾಖೆಗೆ ತನ್ನದೇ ಆದ ಕನಿಷ್ಠ ಪ್ರಮಾಣದ ಸಿಬ್ಬಂದಿ ಮತ್ತು ಸಂಪನ್ಮೂಲ ಮಾತ್ರ ಇರುವುದು. ಹೆಚ್ಚಿನ ರೀತಿಯಲ್ಲಿ ಸ್ಥಳೀಯ ನಗರಪಾಲಿಕೆಗಳು, ನಗರಾಭಿವೃದ್ಧಿ ಪ್ರಾಧಿಕಾರಗಳು, ಕಂದಾಯ ಅಧಿಕಾರಿಗಳು, ಪೊಲೀಸ್ ಅಧಿಕಾರಿಗಳು, ಪ್ರವಾಸೋದ್ಯಮ ಅಧಿಕಾರಿಗಳ ಮೂಲಕವೇ ಕಾರ್ಯ ನಿರ್ವಹಿಸಬೇಕಾಗುತ್ತದೆ. ಇದರಿಂದ ನಗರಾಭಿವೃದ್ಧಿ ಇಲಾಖೆ, ಕಂದಾಯ ಇಲಾಖೆ, ಪೊಲೀಸ್ ಇಲಾಖೆ, ಕನ್ನಡ ಸಂಸ್ಕೃತಿ ಇಲಾಖೆ ಪ್ರವಾಸೋದ್ಯಮ ಇಲಾಖೆ ಹಾಗೂ ಇತರೇ ಇಲಾಖೆಗಳ ಮೂಲಕವೇ ಉದ್ದೇಶಿತ ಗುರಿ ಸಾಧಿಸಬೇಕಾಗುತ್ತದೆ. ಈ ಎಲ್ಲ ಇಲಾಖೆಗಳ ಕಾರ್ಯದರ್ಶಿಗಳು ಮತ್ತು ಮುಖ್ಯಸ್ಥರೊಂದಿಗೆ ಸಮನ್ವಯ ಸಾಧಿಸಲು ಕೇಂದ್ರಸ್ಥಾನ ಬೆಂಗಳೂರಿನಲ್ಲಿ ಇರುವುದು ಅಗತ್ಯವಾಗಿದೆ.

ಆ) ಮೊದಲು ಮೈಸೂರು ಶ್ರೀರಂಗಪಟ್ಟಣ ಪ್ರದೇಶವನ್ನು ಪರಂಪರೆ ಕ್ಷೇತ್ರವನ್ನಾಗಿ ಅಭಿವೃದ್ಧಿಪಡಿಸಲು ಯೋಜಿಸಲಾಗಿತ್ತು. ತದನಂತರ ಇತರೆ ಪ್ರದೇಶಗಳಾದ ಬಿಜಾಪುರ, ಗುಲ್ಬರ್ಗಾ, ಬೀದರ್, ಕಿತ್ತೂರು ಮುಂತಾದ ಸ್ಥಳಗಳನ್ನು ಸೇರಿಸಿ ರಾಜ್ಯವ್ಯಾಪಿ ಕಾರ್ಯಕ್ಷೇತ್ರ ನೀಡಲಾಗಿದೆ. ಆದ್ದರಿಂದ ಬೆಂಗಳೂರಿನಲ್ಲಿ ಕೇಂದ್ರಸ್ಥಾನ ಮಾಡುವುದು ಸೂಕ್ತ.

ಇ) ಬಿಜಾಪುರ, ಗುಲ್ಬರ್ಗಾ, ಬೀದರ್‌ಗಳಿಗೆ ಪ್ರವಾಸ ಹೋಗಲು ಮೈಸೂರಿನಿಂದ ಬೆಂಗಳೂರಿನ ಮೂಲಕವೇ ಹೋಗಬೇಕಾಗುತ್ತದೆ. ಪ್ರವಾಸದ ದೃಷ್ಟಿಯಿಂದ ಬೆಂಗಳೂರು ಸೂಕ್ತವಾಗಿದೆ.

ಈ) ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯವು ಹೊಸಪೇಟೆಯಲ್ಲಿ ಇರುವುದರಿಂದ ಅಲ್ಲಿಗೆ ಪ್ರವಾಸ ಹೋಗಿ ಬರಲು ಬೆಂಗಳೂರು ಕೇಂದ್ರ ಸ್ಥಾನ ಸೂಕ್ತವಾಗಿದೆ.

ಉ) ಮೈಸೂರು ಶ್ರೀರಂಗಪಟ್ಟಣ ಪರಂಪರೆ ಕ್ಷೇತ್ರದ ಕೆಲಸಕ್ಕಾಗಿ ಬೆಂಗಳೂರಿನಿಂದ ವಾರದಲ್ಲಿ ಒಂದೆರಡು ದಿನ ಹೋಗಿ ಬರಲು ತೊಂದರೆ ಆಗುವುದಿಲ್ಲ.

ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ಪರಂಪರೆ ಆಯುಕ್ತರ (ಪರವಾಗಿ) ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಇವರು ಮೈಸೂರಿನಲ್ಲಿ ಉಪನಿರ್ದೇಶಕರ ಕಛೇರಿಯನ್ನು ಕೆಲವು ಸಿಬ್ಬಂದಿ ಸಮೇತ ಮುಂದುವರಿಸುವಂತೆ ಕೋರಿರುತ್ತಾರೆ.

ಈ ಮುಂದುವರಿಕೆಗೆ ಸಮರ್ಥನೆಯಾಗಿ ಈ ಕೆಳಕಂಡ ವಿಷಯಗಳನ್ನು ಸರ್ಕಾರದ ಮುಂದೆ ಇಟ್ಟಿರುತ್ತಾರೆ.

1. ಪರಂಪರೆ ಪ್ರದೇಶ ಮತ್ತು ಕಟ್ಟಡಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು.

2. ಮೈಸೂರು ಶ್ರೀರಂಗಪಟ್ಟಣ ಪರಂಪರೆ ಪ್ರದೇಶಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಕುರಿತಂತೆ ಪಾರಂಪರಿಕ ಸಂರಕ್ಷಣೆಗೆ ತಜ್ಞ ಸಮಿತಿಯನ್ನು ಸರ್ಕಾರವು ರಚಿಸಿದ್ದು, ಸಮಿತಿಯು ಪರಂಪರೆ ಅಭಿವೃದ್ಧಿ ಕುರಿತಂತೆ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ತಜ್ಞರ ಸಲಹೆಯೊಂದಿಗೆ ಕಾರ್ಯಪ್ರವೃತ್ತವಾಗಿರುವುದು.

3. ದಸರಾ 2004ರ ಸಂದರ್ಭದಲ್ಲಿ ಮೈಸೂರಿನಲ್ಲಿ ಪರಂಪರೆ ಪ್ರಚಾರಣೆ ಪರಂಪರೆ ಸ್ವಚ್ಛತಾ ಕಾರ್ಯಕ್ರಮಗಳು ಪರಂಪರೆ ಕಾಲ್ನಡಿಗೆ ಮುಂತಾದವುಗಳ ಮುಖೇನ ಪರಂಪರೆ ಬಗ್ಗೆ ಜಾಗೃತಿ ಮೂಡಿಸುವಲ್ಲಿ ಇಲಾಖೆಯ ಸಹಕಾರ ಅಗತ್ಯವಾಗಿರುವುದು.

ಈ ಕೆಳಕಂಡ ಹುದ್ದೆಗಳ ಸಮೇತ ಉಪನಿರ್ದೇಶಕರ ಕಛೇರಿಯನ್ನು ಮೈಸೂರಿನಲ್ಲಿಯೇ ಮುಂದುವರಿಸಲು ಸರ್ಕಾರ ನಿರ್ಧರಿಸಿದೆ.

1) ಪ್ರಥಮ ದರ್ಜೆ ಸಹಾಯಕರು - ಒಂದು ಹುದ್ದೆ
2) ಶೀಘ್ರಲಿಪಿಗಾರರು - ಒಂದು ಹುದ್ದೆ
3) ಗ್ರೂಪ್-ಡಿ ನೌಕರರು - ಒಂದು ಹುದ್ದೆ

ಮುಂದುವರೆದು, ಪರಂಪರೆ ಆಯುಕ್ತರ ಕಾರ್ಯವ್ಯಾಪ್ತಿಯ ದೃಷ್ಟಿಯಿಂದ ಹಾಗೂ ಅವರ ಕಾರ್ಯನಿರ್ವಹಣೆಗೆ ಪರಿಣಾಮಕಾರಿಯಾಗಲು ಆಯುಕ್ತರ ಕಛೇರಿಯ ಕೇಂದ್ರಸ್ಥಾನವನ್ನು ಬೆಂಗಳೂರಿಗೆ ವರ್ಗಾಯಿಸಲು ಸರ್ಕಾರವು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 43 ಕೆಎಂಯು 2005, ಬೆಂಗಳೂರು, ದಿನಾಂಕ: 30ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧೀನಕ್ಕೆ ಬರುವ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು, ಈ ಕಛೇರಿಯ ಉಪನಿರ್ದೇಶಕರು ಮತ್ತು ಈ ಹುದ್ದೆಗೆ ಹೊಂದಿಕೊಂಡಂತಿರುವ ಈ ಕೆಳಕಂಡ ಹುದ್ದೆಗಳೊಂದಿಗೆ ಉಪನಿರ್ದೇಶಕರ ಕಛೇರಿಯನ್ನು ಮೈಸೂರಿನಲ್ಲಿಯೇ ಮುಂದುವರಿಸಿ ಆದೇಶಿಸಿದೆ.

1) ಪ್ರಥಮ ದರ್ಜೆ ಸಹಾಯಕರು - ಒಂದು ಹುದ್ದೆ
2) ಶೀಘ್ರಲಿಪಿಗಾರರು - ಒಂದು ಹುದ್ದೆ
3) ಗ್ರೂಪ್-ಡಿ ನೌಕರರು - ಒಂದು ಹುದ್ದೆ

ಮುಂದುವರೆದು, ಆಯುಕ್ತರು ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಈ ಕಛೇರಿಯನ್ನು ಇತರ ಸಿಬ್ಬಂದಿ ಸಮೇತ ಆಡಳಿತಾತ್ಮಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಮೈಸೂರಿನಿಂದ ಬೆಂಗಳೂರಿಗೆ ಸ್ಥಳಾಂತರಿಸಲು ಹಾಗೂ ತಾತ್ಕಾಲಿಕವಾಗಿ ಇದನ್ನು ಕಸ್ತೂರ ಬಾ ರಸ್ತೆಯಲ್ಲಿರುವ ಸರ್ಕಾರಿ ವಸ್ತು ಸಂಗ್ರಹಾಲಯದಲ್ಲಿ ಕಾರ್ಯನಿರ್ವಹಿಸಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 749

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ:** ಮೆ: ಫ್ಲೊಲೈಟ್ ಸಿಸ್ಟಮ್ಸ್ ಕಂಪನಿಗೆ 1 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕುದುರೆಗುಂಡಿ/2004/340 ದಿನಾಂಕ: 27.12.2004 ಮತ್ತು 17.02.2005.

2. ದಿನಾಂಕ: 5.3.2005 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ಫ್ಲೊಲೈಟ್ ಸಿಸ್ಟಮ್ಸ್ ಈ ಕಂಪೆನಿಗೆ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಕುದುರೆಗುಂಡಿ ಗ್ರಾಮದ, ಕುದುರೆಗುಂಡಿ ಹಳ್ಳಕ್ಕೆ ಅಡ್ಡಲಾಗಿ ಒಂದು ಮೆಗಾವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ದಿನಾಂಕದಂದು ನಡೆದ ಹಂಚಿಕೆ ಸಮಿತಿ ಸಭೆಯಲ್ಲಿ ಅನುಮೋದಿಸಿದ್ದನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 446 ಎನ್‌ಸಿಇ 2004, ಬೆಂಗಳೂರು, ದಿನಾಂಕ: 5ನೇ ಏಪ್ರಿಲ್ 2005**

ಮೆ: ಫ್ಲೊಲೈಟ್ ಸಿಸ್ಟಮ್ಸ್ ಕಂಪೆನಿಗೆ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಕುದುರೆಗುಂಡಿ ಗ್ರಾಮದ, ಕುದುರೆಗುಂಡಿ ಹಳ್ಳಕ್ಕೆ ಅಡ್ಡಲಾಗಿ ಒಂದು ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲಸಂಪನ್ಮೂಲ ಇಲಾಖೆಯ ಅನುಮತಿ ಪಡೆಯಬೇಕೆಂಬ ಷರತ್ತಿನೊಂದಿಗೆ ಮತ್ತು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಹಿನ್ನೆಲೆಯಲ್ಲಿ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 750

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ: ಅಟ್ರಿಯ ಪವರ್ ಕಾರ್ಪೋರೇಷನ್ ಕಂಪನಿಗೆ ಹಾವೇರಿ ಜಿಲ್ಲೆಯ ರಾಣಿಬೆನ್ನೂರು ತಾಲ್ಲೂಕಿನ ನಲವಗಲ್ ಎಂಬಲ್ಲಿ 8 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಸ್ಥಾವರ ಸ್ಥಾಪಿಸಲು ನಿರಕ್ಷೇಪಣಾ ಪತ್ರವನ್ನು ನೀಡುವ ಬಗ್ಗೆ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/03/ಅಟ್ರಿಯ/2005/437 ದಿನಾಂಕ: 04.3.2005.
2. ದಿನಾಂಕ: 5.3.2005 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಹಾವೇರಿ ಜಿಲ್ಲೆಯ ರಾಣಿಬೆನ್ನೂರು ತಾಲ್ಲೂರಿನ ನಲವಗಲ್ ಗ್ರಾಮದಲ್ಲಿ 8 ಮೆಗಾವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಸ್ಥಾವರ ಸ್ಥಾಪಿಸಲು ಮೆ: ಅಟ್ರಿಯ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರು ಸಲ್ಲಿಸಿದ ಮನವಿಯನ್ನು ಪರಿಶೀಲಿಸಿ ಯೋಜನೆಯ ತಾಂತ್ರಿಕ ಶಕ್ಯತೆಯ ಹಿನ್ನೆಲೆಯಲ್ಲಿ ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ (2)ರಲ್ಲಿ ಹೇಳಿದ ದಿನದಂದು ನಡೆದ ಹಂಚಿಕೆ ಸಮಿತಿಯ ಮುಂದೆ ಪ್ರಸ್ತಾವನೆಯನ್ನು ಮಂಡಿಸಿ ಸದರಿ ಹಂಚಿಕೆ ಸಮಿತಿ ಸಭೆಯ ಮೆ: ಅಟ್ರಿಯ ಪವರ್ ಕಾರ್ಪೋರೇಷನ್ ಲಿಮಿಟೆಡ್ ಈ ಕಂಪನಿಗೆ ಹಾವೇರಿ ಜಿಲ್ಲೆಯ ರಾಣಿಬೆನ್ನೂರು ತಾಲ್ಲೂಕಿನ ನಲವಗಲ್ ಗ್ರಾಮದಲ್ಲಿ 8 ಮೆಗಾವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಸ್ಥಾವರ ಸ್ಥಾಪಿಸುವ ಬಗ್ಗೆ ನಿರಕ್ಷೇಪಣಾ ಪ್ರಮಾಣ ಪತ್ರ ನೀಡುವ ಕುರಿತು ಪರಿಗಣಿಸಿ ಸಹಮತಿ ನೀಡಿದ್ದನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 59 ಎನ್‌ಸಿಇ 2005, ಬೆಂಗಳೂರು, ದಿನಾಂಕ: 9ನೇ ಮೇ 2005**

ಸರ್ಕಾರವು ಮೆ: ಅಟ್ರಿಯ ಪವರ್ ಕಾರ್ಪೋರೇಷನ್ ಲಿಮಿಟೆಡ್ ಈ ಕಂಪನಿಗೆ ಹಾವೇರಿ ಜಿಲ್ಲೆಯ ರಾಣಿಬೆನ್ನೂರು ತಾಲ್ಲೂಕಿನ ನಲವಗಲ್ ಗ್ರಾಮದಲ್ಲಿ 8 ಮೆಗಾವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ವಿದ್ಯುತ್ ಘಟಕ ಸ್ಥಾಪಿಸಲು ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ತಾತ್ವಿಕವಾಗಿ ನಿರಕ್ಷೇಪಣೆಯನ್ನು ನೀಡಿದೆ.

1. ವಿದ್ಯುತ್ ಸರಬರಾಜು ಮಾಡಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಿಂದ ಇವ್ಯಾಕ್ಯುವೇಷನ್ (Evacuation) ಅನುಮತಿ ಪಡೆದಿರತಕ್ಕದ್ದು.
2. ಮೂರನೇ ವ್ಯಕ್ತಿಗೆ ವಿದ್ಯುತ್‌ನ್ನು ಮಾರಾಟ ಮಾಡಬೇಕೆಂದು ನಿರ್ಧರಿಸಿದರೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಮತ್ತು ಬ್ಯಾಂಕಿಂಗ್ (Wheeling & Banking) ಒಡಂಬಡಿಕೆ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಮಾರಾಟ ಮಾಡುವುದಾದರೆ ವಿದ್ಯುತ್ ಖರೀದಿ ಒಡಂಬಡಿಕೆ (Power Purchase Agreement) ಮಾಡಿಕೊಳ್ಳತಕ್ಕದ್ದು.
3. ಜೈವಿಕ ಇಂಧನ ಆಧಾರಿತ ವಿದ್ಯುತ್ ಸ್ಥಾವರಕ್ಕೆ ಬೇಕಾದ ಶಾಸನಬದ್ಧ ಪರವಾನಿಗೆಗಳನ್ನು ಅರಣ್ಯ ಕಂದಾಯ ಮತ್ತು ಕರ್ನಾಟಕ ರಾಜ್ಯ ನಿಯಂತ್ರಣ ಮಂಡಳಿ ಮುಂತಾದ ಇಲಾಖೆಗಳಿಂದ ಪಡೆಯತಕ್ಕದ್ದು.
4. ಎಲ್ಲಾ ಶಾಸನಬದ್ಧ ಪರವಾನಿಗೆಗಳನ್ನು ಪಡೆದ ಮೇಲೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ವಿವರವಾದ ಯೋಜನಾ ವರದಿಗೆ (Detailed Project Report) ಅನುಮೋದನೆ (Clearance) ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 751

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.